ತೊದಲ್ನುಡಿ ಗ್ರಂಥಮಾಲೆ—ನುಡಿ ೧೫

# ರಂಗಭೂಮಿ

ಎಸ್. ವೆಂಕಟರಾಜ.

ಕಿರಿಯರ ಪ್ರಪಂಚ, ಉಡುಪಿ.

—ಅತ್ತಿಗೆಗೆ

ಅರ್ಪಿತ—

23-7-1935

25-7-1935



ಮುದ್ರಕರು:

ನವಯುಗ ಪ್ರೆಸ್, ಉಡುಪಿ.

೧೯೪೧

ಎಂಟಾಣೆ

# ಮುನ್ನುಡಿ

ಕವಿಕರ್ಮವಾದ ಕಾವ್ಯನಿರ್ಮಾಣದಲ್ಲಿ ನಾಟಕಕಾರನ ಸ್ಥಾನವು ಗಣನೀಯವಾದುದು. ಆದುದರಿಂದಲೆ 'ನಾಟಕಾಂತಂ ಕವಿತ್ವಂ'–ಎಂಬ ಮಾತು ಪ್ರತೀತವಾಗಿ ಆ ಯಶಃಕಾಮನೆಯೆ ಕಾಳಿದಾಸಾದಿ ಮಹಾಕವಿಗಳನ್ನು ನಾಟಕ ರಚನೆಗಾಗಿ ಪ್ರೇರೇಪಿಸಿರುವುದು. ಕತೆಗಾರನಿಗೆ ವಸ್ತುರಚನೆಯಲ್ಲಿ ಹೆಚ್ಚಿನ ವ್ಯಕ್ತಿಗತ ಸ್ವಾತಂತ್ರ್ಯವಿದೆ. ತನ್ನ ಕಥಾನಾಯಕನ ಸುಖ ದುಃಖದ ಸನ್ನಿವೇಶದೊಂದಿಗೆ ತನ್ನ ವೈಯಕ್ತಿಕ ಅಭಿಪ್ರಾಯ ವನ್ನು ಹೊರಗೆಡಹಿ ಅದನ್ನು ವಿರಲವಾಗಿ ತೋರಿಸಬಲ್ಲ. ಕತೆಯ ಪಾತ್ರಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುವುದರೊಂದಿಗೆ, ಆತ್ಮಾನುಭೂತಿಯ ಬಣ್ಣವನ್ನು ಬೆರಸಿ ಅದನ್ನು ಉಜ್ವಲ ಗೊಳಿಸಬಲ್ಲ. ಕಥಾನಾಯಕನ ಕಣ್ಣೀರಿನೊಂದಿಗೆ ಇವನದೂ ಎರಡು ಹನಿ ನೀರು, ಸಂತೋಷದ ಹಿಗ್ಗಿನೊಂದಿಗೆ ಇವನದೂ ಒಂದು ನಗೆ ಒಂದುಗೂಡಬಲ್ಲುದು. ಆದರೆ ನಾಟಕಕಾರನ ಸ್ಥಿತಿಯು ಬೇರೆ. ತಮ್ಮ ತಮ್ಮ ಆಗುಹೋಗುಗಳನ್ನು ಪಾತ್ರಗಳೇ ಪ್ರತ್ಯೇಕವಾಗಿ ತೋರಿಸಬೇಕಲ್ಲದೆ ಅಲ್ಲಿ ಇವನ ಕೈಬಳಕೆಯು ಸಲ್ಲದು. ನಾಟಕದಲ್ಲಿ ಕವಿಯ ತನ್ನತನವಿಲ್ಲ. ಎಲ್ಲವೂ ಪಾತ್ರ ಗತವಾದುದು. ತನ್ನತನವನ್ನು ಪಾತ್ರಗತವಾಗಿ ಮಾರ್ಪಡಿಸಿ ಆ ಸುಖದುಃಖಗಳ ಸಮೀಕರಣವನ್ನು ಸಭಿಕರ ಮನಸ್ಸಿನ ಮೇಲೆ ಪರಿಣಾಮಕಾರಿಯಾಗಿ ಪ್ರತಿಬಿಂಬಿಸಲಿರುವುದು ನಾಟಕ ಕಾರನ ಕಲಾಕೌಶಲ್ಯ. ಕತೆಗಳಲ್ಲಿ ಕತೆಗಾರನಿಗೆ ಪ್ರವೇಶವಿದೆ. ಅವನು ಪ್ರತಿ ಸನ್ನಿವೇಶಗಳನ್ನು ಮನಬಂದಂತೆ ವಿಮರ್ಶಿಸಬಲ್ಲ ನಾದರೆ, ನಾಟಕಕಾರನು ತೆರೆಯ ಹಿಂದುಳಿದು ಪಾತ್ರಮುಖೇಣ

ವಸ್ತುವಿನ ಸ್ವರೂಪವನ್ನು ನಿರೂಪಿಸಿ ತನ್ನ ಕೈವಾಡವನ್ನು ತೋರಿಸಬೇಕಷ್ಟೆ. ಇದಕ್ಕೆ ಹೆಚ್ಚಿನ ಸಂಸ್ಕಾರದ ಅಗತ್ಯವಿದೆ.

ನಾಟಕವು ಚಿರಂತನವಾಗಿ ಬಾಳಬೇಕಾದರೆ ಸುಂದರವಾದ ವಸ್ತುವಿನ ಅಗತ್ಯವಿದೆ. ಕವಿಯು ತನ್ನ ಮನೋಧರ್ಮಕ್ಕೆ ಅನುಗುಣವಾದ ಉದ್ದೇಶವನ್ನು ಕಲ್ಪಿಸಿಕೊಂಡು ಆ

ವಸ್ತು

ಉದ್ದೇಶದ ಸಾಧನೆಗಾಗಿ ಸುಂದರವಾದ ವಸ್ತುವನ್ನು ಆಯ್ದುಕೊಳ್ಳುವನು. ಒಳ್ಳಿತು-ಕೆಟ್ಟದು ಇವುಗಳ ತುಮುಲಿನ ಸುಖದುಃಖಗಳ ಸಂಘರ್ಷಣೆಯಲ್ಲಿ ಒಳ್ಳಿತಿನ ಔನ್ನತ್ಯವನ್ನು-ಕೆಟ್ಟದರ ಅವನತಿಯನ್ನು ನಿರೂಪಿಸಲು ಹಿನ್ನೆಲೆಯಾಗಿ ನಿಂತಿರುವುದೇ ವಸ್ತು. ಇದು ಪೌರಾಣಿಕ ಚಾರಿತ್ರಿಕ ಸಾಮಾಜಿಕ ಎಂಬ ಮೂರು ಪರಿಯಾಗಿದೆ. ಕವಿಯು ಆ ವಸ್ತುವನ್ನು ತನ್ನ ನಿರ್ಮಾಣದ ಹಲವು ಮುಖ್ಯ—ಅಮುಖ್ಯ ಪಾತ್ರ

ಪಾತ್ರ

ಗಳೊಳಗೆ ಹಂಚಿಬಿಡುವನು ನಾಟಕದ ಔತ್ಕರ್ಷವು ಈ ಪಾತ್ರಸೃಷ್ಟಿಯನ್ನು ಹೊಂದಿಕೊಂಡಿರುವುದು. ಈ ಪಾತ್ರಗಳು ಚಿರವಾಗಿ ಬಾಳಬಲ್ಲುವಾದರೆ ನಾಟಕವೂ ಬಾಳಬಲ್ಲುದು. ಅಲ್ಲವಾದರೆ ಪಾತ್ರಶಕ್ತಿಯು ಕ್ಷೀಣವಾಗಿ ನಾಟಕದ ಉದ್ದೇಶವು ಸಾಧಿಸದೆ ಕವಿಯ ರಚನೆಯು ಕ್ಷಣಿಕವಾಗುವುದು.

ನಾಟಕ ರಚನೆಯಲ್ಲಿ ಪ್ರತಿಯೊಂದು ಪಾತ್ರಕ್ಕೂ ನಿಶ್ಚಿತವಾದ ಸ್ವರೂಪವು ಇದ್ದೇ ಇದೆ. ಒಂದೊಂದು ರಸ-ಭಾವದ

ಸ್ವರೂಪ

ಪರಿಪುಷ್ಟಿಗಾಗಿ ಒಂದೊಂದು ಪಾತ್ರವು ಪರಿಶ್ರಮಿಸಿ, ಆರಸಭಾವಗಳ ಸಾಂಕರ್ಯದಿಂದಾಗಿ ಕಲಾಸಿದ್ಧಿಯನ್ನು ನಿರ್ವಹಿಸಲಿರುವುದು ಆ ಸ್ವರೂಪ. ಸ್ವರೂಪವು ವಸ್ತುವನ್ನು ಅವಲಂಬಿಸಿದ್ದರೆ ಪ್ರತಿಪಾತ್ರವೂ ವಸ್ತುವಿಗೆ ಪರಿಪೋಷಕವಾಗಿ ವಸ್ತುಮಯವಾಗಿ ಪರಿಣಮಿಸುವುದು. ಅಲ್ಲವಾದರೆ

ಸೂಕ್ಷ್ಮತರವಾದ ಭಾವನೆಯ ಕಿಡಿಯೊಂದನ್ನು ಕೆದರಿಸಿ ಅದಕ್ಕೆ ಉಪಜೀವಕವಾಗಿ ನೆಲೆನಿಂತು ಭಾವನಾಮಯವಾಗಿ ಪರಿಣಮಿಸುವುದು. ಆಧುನಿಕ ಸಾಹಿತ್ಯದ ಹಲವು ಕೃತಿಗಳ ವಸ್ತುವು ತೀರಾ ಲಘುವಾಗಿದ್ದರೂ ಭಾವನೆಯ ಉಜ್ವಲತೆಯಿಂದಾಗಿ ನಾಟಕವು ಮಹತ್ತರವಾಗಿರುವುದು. ಆದರೆ ಅದರ ಉಳಿತಾಯವು ವಸ್ತುವಿನಲ್ಲಿಲ್ಲ-ಭಾವನಾ ಪ್ರಪಂಚದಲ್ಲಿ!

ಪಾತ್ರದ ಸ್ವರೂಪವು ಪರಿಣಾಮಕಾರಿಯಾಗುವಂತೆ ಕವಿಯು ವಿರುದ್ಧ ಸನ್ನಿವೇಶಗಳನ್ನು ಕಲ್ಪಿಸಿಕೊಳ್ಳಲಿಕ್ಕೆ ಬೇಕು.

ಸನ್ನಿವೇಶ

ಇದಕ್ಕಾಗಿಯೇ ಸಂಸ್ಕೃತ ಸಾಹಿತ್ಯದಲ್ಲಿ ಪಂಚಸಂಧಿಗಳ ನಿರ್ಮಾಣವಿದೆ. ಆಧುನಿಕ ನಾಟಕವು ಆ ಲಕ್ಷಣಶಾಸ್ತ್ರದ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಟ್ಟು ನಡೆಯಲಾರದಾದರೂ ಆ ಪರಿಳಿತಗಳ ಹೊರತು ನಾಟಕದ ನಿರ್ವಹಣವಾಗಲಾರದು. ನಾಟಕದ ನಾಯಕನು ತನ್ನ ಇಷ್ಟಪ್ರಾಪ್ತಿಯ ಕಡೆ ಹೆಜ್ಜೆಹೆಜ್ಜೆಗೂ ಮುಂಬರಿದು ತನ್ನ ಮಾರ್ಗವನ್ನು ಪ್ರತಿರೋಧಿಸಿರುವ ವಿರುದ್ಧಶಕ್ತಿಯನ್ನು ಇದಿರಿಸಲಿರುವನು. ಈ ಸಂಘರ್ಷಣೆಯೇ ನಾಟಕದ ಜೀವಾಳ! ಅಲ್ಲಿಯ ತನಕ ಏರುತ್ತ ಹೋದ ನಾಟಕದ ಸ್ವರೂಪವು ಅಲ್ಲಿಂದ ಕೆಳಗಿಳಿಯತೊಡಗಿ ಸುಖಾಂತವಾದರೆ ಅಭೀಷ್ಟಿಯಲ್ಲಿ—ದುಃಖಾಂತವಾದರೆ ವಿನಷ್ಟಿಯಲ್ಲಿ ಕೊನೆಗಾಣುವುದು.

ನಾಟಕದ ಬಾಹ್ಯಸ್ವರೂಪದ ವಿವೇಚನೆಯಲ್ಲಿ ಸಂಭಾಷಣೆಯೇ ಅದರ ಯೋಗ್ಯತೆಗೆ ನಿರ್ಣಾಯಕವಾಗಿದೆ. ಸುಂದರ

ಸಂಭಾಷಣೆ

ವಾದ ವಸ್ತು- ಸಜೀವವಾದ ಪಾತ್ರಸೃಷ್ಟಿ-ನಿರ್ದುಷ್ಟವಾದ ಸ್ವರೂಪ—ಸೂಕ್ಷ್ಮವಿವೇಚನೆಯ ಸನ್ನಿವೇಶ ಇವುಗಳೆಲ್ಲ ನಿರ್ಬಲ ನಿರೂಪಣೆಯಿಂದಾಗಿ ಮಾಸಿಹೋಗ

ಲಿರುವುವು. ಸಂಭಾಷಣೆಯು ಮನೋಹರವಾಗಿರುವುದಾದರೆ ದೃಶ್ಯಕಾವ್ಯದ ಮಿಕ್ಕುಳಿದ ಎಲ್ಲಾ ದೋಷಗಳು ಕಡೆಗಂಡು ರೂಪಕವು ದೃಶ್ಯರೂಪೇಣ ಅಲ್ಲವಾದರೂ, ಕಾವ್ಯ ದೃಷ್ಟಿಯಿಂದ ನಿರ್ಭರವಾಗಿ ಬಾಳಬಲ್ಲುದು. ನಾಟಕಕಾರನು ಸಾಮುದಾಯಿಕ ಸಂಭಾಷಣೆಯು ಸಲ್ಲದಾಗ ಪಾತ್ರಮುಖದಿಂದ ಸ್ವಗತವನ್ನು ನುಡಿಸುವನು. ಆಗ ನಟನು ಸಭಿಕರನ್ನೇ ಆತ್ಮೀಯರನ್ನಾಗಿ ಎಣಿಸಿ ತನ್ನ ಹೃದ್ಗತವನ್ನು ಹೊರಹೊಮ್ಮಿಸುವನು. ಆಗಲಾಗ ನೆರೆದ ಸಭೆಯೇ ಒಂದು ವಿಶ್ವಕುಟುಂಬವಾಗಿ ಸರ್ವವೂ ಸ್ವಕೀಯವಾಗುವುದು. ಆಧುನಿಕ ಹಲವು ಸಾಹಿತಿಗಳ ಅಭಿಪ್ರಾಯದಲ್ಲಿ ಸ್ವಗತವು ಅಸಂಗತವಾಗಿರುವುದಾದರೂ ಸಾಹಿತ್ಯದಲ್ಲಿನ ಅದರ ಪ್ರಭಾವವು ಇಂದಿಗೂ ಅವಿಚ್ಛಿನ್ನವಾಗಿಯೇ ನಡೆದಿರುವುದು.

ನಟನಲ್ಲಿ ನಾಯಕನ ರೂಪ-ಗುಣಗಳ ಆರೋಪದಿಂದಾಗಿ ದೃಶ್ಯಕಾವ್ಯವು 'ರೂಪಕ'ವೆನಿಸಿದೆ. ಅದರ ಪರಿಣಾಮವು ಕುಶಲ ನಟನ ಅಭಿನಯದ ಚಾತುರ್ಯದಿಂದಾಗಿ. ಅಭಿನಯವು ಭೂತಕಾಲದ ಪ್ರಣಾಲಿಯನ್ನು ವರ್ತಮಾನದೊಂದಿಗೆ ಹೊಂದಿಸಿ ಬಾಳಿನ ಭವಿಷ್ಯವನ್ನು ತಿದ್ದಲಿರುವುದು. ಆಗ ಅನುಭವವಾಗುವುದು ನಟನ ವ್ಯಕ್ತಿತ್ವವಲ್ಲ. ನಾವು ನಟನ ಅನುಕರಣೆಯ ಸಾಮರ್ಥ್ಯದಿಂದಾಗಿ ಆತನೊಂದಿಗೆ ಬೆರೆತು ಹೋಗಿ, ಕಥಾನಾಯಕನ ಸಮಕಾಲೀನರಾಗಿ ಆತನ ಸುಖದುಃಖಗಳಲ್ಲಿ ಸಹಭಾಗಿಗಳಾಗುವೆವು. ಅದು ನಟನೆಯ ಮಹತ್ವ. ಅಂದಿಗೇನೇ ಕವಿಯ ಉದ್ದೇಶವು ಸಿದ್ಧಿಸಿದಂತಾಗುವುದು.

ನಟನೆ

'ರಂಗಭೂಮಿ'ಯು ನಾಟಕವಲ್ಲ ಒಂದು ಪ್ರಕರಣ ಮಾತ್ರ. ಜನರಲ್ಲಿ ಒಂದು ಹೊಸ ಹುರುಪು ಹುಟ್ಟಿ ಅದು

ವೈಯಕ್ತಿಕವಾದ ಅಯೋಗ್ಯತೆಯಿಂದಾಗಿ ಫಲಕಾರಿಯಾಗದೆ ವಿನಾಶಕ್ಕೆ ಹೇತುವಾಗುವುದು. ಇದು ಜನತೆಯ ಸಹಜವಾದ ದೌರ್ಬಲ್ಯ. ಅದರಿಂದಾಗಿ ಹಲವು ಸಂಸ್ಥೆಗಳು ಗಳಿಗೆಗೊಂದ ರಂತೆ ಆವಿರ್ಭವಿಸಿ, ಅಂತೆಯೇ ಅಂತರ್ಧಾನವಾಗುತ್ತಿರುವುವು. ಈ ತತ್ವದ ಸೂಕ್ಷ್ಮ ಪರಿಶೀಲನೆಯೇ 'ರಂಗಭೂಮಿ.' ಇದರ, ಪಾತ್ರಗಳನ್ನು ವೈಯಕ್ತಿಕ ದೃಷ್ಟಿಯಿಂದ ಗಣಿಸಲಾಗದು. ವಿಶಾಲ ದೃಷ್ಟಿಕೋಣದಿಂದ ಕಂಡರೆ ದಿನನಿತ್ಯದಲ್ಲಿ ಇಂತಹ ಪಾತ್ರಗಳನ್ನು ಎಲ್ಲೆಲ್ಲೂ ಕಾಣುತಿರುವೆವು.—ಇಂತಹ ಪರಿಸ್ಥಿತಿಯನ್ನು ಅನುಭವಿಸುತ್ತಿರುವೆವು. ಇಂತಹ ನಿರ್ಧಾರಕ್ಕೆ ಬಂದು ಓದುಗರು ಈ ಉದ್ದೇಶವನ್ನು ಇದರಲ್ಲಿ ಕಂಡುಕೊಂಡರೆ ಕವಿಯ ಪರಿಶ್ರಮವು ಸಫಲ.

ಉಡುಪಿ,
29–8–1941 } **ಯಸ್. ವೆಂಕಟರಾಜ**

---

# ಪ್ರಕಾಶಕರ ಮಾತು

'ರಂಗಭೂಮಿ'ಯು ಕಿರಿಯರ ಪ್ರಪಂಚದ ಹದಿನೈದನೆಯ ಕಾಣಿಕೆ. ಕಾಲವೆಷ್ಟು ಕಷ್ಟತಮವಾಗಿದ್ದರೂ ಪ್ರಪಂಚವು ಸಾಗಲೇ ಬೇಕು, ಅದು ಹೆಜ್ಜೆಯಿಡುವದನ್ನು ಕ್ರಮತಪ್ಪದೆ ಹಾಕಲೇ ಬೇಕು ಎಂಬುದಕ್ಕಾಗಿ ಇದನ್ನು ಪ್ರಕಟಿಸಿದೆವು; ಮುದ್ರಣಖರ್ಚು ವಿಪರೀತವಾಗಿ ಬೆಳೆದಿರುವ ಇಂದಿನ ದಿನದಲ್ಲೂ ಈ ಸಾಹಸವನ್ನು ಕೈಕೊಂಡೆವು. ಈ ಕಾಣಿಕೆಯನ್ನು ಸ್ವೀಕರಿಸುವ ಕಾರ್ಯ ಕನ್ನಡಿಗರ ಪಾಲಿಗೆ.

ಇದು ವಿನೋದಪ್ರಧಾನವಾಗಿರುವ ನಾಟಕ; ಅಥವಾ ನಡೆದ—ನಡೆಯುವ—ವಿದ್ಯಮಾನದ ಒಂದು ಪಡಿಯಚ್ಚು ಎಂದರೂ ಸರಿಯೆ. ಒಂದು ನಾಟಕವಾಗಲು ಸುಲಭದಲ್ಲಿ ಸಿಕ್ಕದ ಸಾಮಾನ್ಯ ಘಟನೆಯೊಂದನ್ನು ತೆಗೆದುಕೊಂಡು ನಾಟಕಕಾರರು ಉತ್ತಮ ಕೃತಿಯನ್ನೇ ಮಾಡಿದ್ದಾರೆ.

ಇದನ್ನು ಬರೆದುಕೊಟ್ಟುದಕ್ಕಾಗಿ ಶ್ರೀ ಯಸ್. ವೆಂಕಟರಾಜರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

ಉಡುಪಿ, 30-8-41

ಕಾರ್ಯದರ್ಶಿ,
**ಕಿರಿಯರ ಪ್ರಪಂಚ, ಉಡುಪಿ.**

# ಪಾತ್ರವರ್ಗ:

**ಪುರುಷ** (ಮುಖ್ಯ)

ರಂಗಾಚಾರಿ — ಪ್ರೊಪ್ರೈಟರ್.

ಕೃಷ್ಣಸ್ವಾಮಿ — ನಟಭೈರವ.

ಸಂಜೀವರಾಯ }
ವರದರಾಯ } — ನಟರು.

ರಮಾನಾಥ — ಸ್ತ್ರೀಪಾತ್ರದವ

ಮುದ್ದ — ಆಳು.

(ಅಮುಖ್ಯ)

ಹುಡುಗ }
ಹುಡುಗಿ } — ಪ್ರಾರ್ಥನೆಯವರು.

ಒಬ್ಬ }
ಮತ್ತೊಬ್ಬ } — ಸಭ್ಯರು.

ಬಾತ್ಮಿದಾರ

ಸಾಹುಕಾರ

ಹೋಟೆಲ್ ಕೀಪರ್

ಪ್ರೊಂಪ್ಟರ್ (ಪ್ರವೇಶವಿಲ್ಲ)
ಹುಡುಗರು (ಪ್ರವೇಶಮಾತ್ರ.)

**ಸ್ತ್ರೀ**

ಗೋದಾವರಿ (ಗೋದು) — ರಂಗಾಚಾರಿಯ ಹೆಂಡತಿ.

ಮಿಸ್. ಮಾಧುರಿ. (ಮಾದು) — ನಟಿ.

# ಅಂಕ ೧

**ದೃಶ್ಯ** — **ಪ್ರವೇಶ**

೧. ಮನೆ — ರಂಗ, ಗೋದು

೨. i ಬೀದಿ — ನೋಟೀಸು ಹಂಚತಕ್ಕವರು. ಹುಡುಗರು

೨.ii ಬೀದಿ — ರಂಗಾಚಾರಿ.

೩. ಮನೆ — ರಂಗ, ಗೋದು, ಮುದ್ದ.

೪. ಮಹಲು — ರಂಗ, ಸಂಜೀವ, ವರದ, ರಮಾನಾಥ. ಮುದ್ದ, ಮಾಧುರಿ.

೫. ಬೀದಿ — ಸಂಜೀವ, ವರದ, ರಮಾನಾಥ, ಕೃಷ್ಣ ಸ್ವಾಮಿ.

೬. ಮನೆ — ರಂಗ, ಮಾಧುರಿ, ಗೋದು, ಮುದ್ದ, ಕೃಷ್ಣಸ್ವಾಮಿ.

೭. ಬೀದಿ — ಕೃಷ್ಣಸ್ವಾಮಿ,

೮. ಮಹಲು — ರಂಗ, ಸಂಜೀವ, ವರದ, ರಮಾನಾಥ, ಮುದ್ದ, ಮಾಧುರಿ, ಕೃಷ್ಣಸ್ವಾಮಿ, ಪ್ರಾರ್ಥನೆಯವರಿಬ್ಬರು, ಕೆಲವು ಹುಡುಗರು, ಒಬ್ಬ, ಮತ್ತೊಬ್ಬ.

೯. ಬೀದಿ — ಒಬ್ಬ, ಮತ್ತೊಬ್ಬ.

೧೦. ಬೀದಿ — ಪ್ರಾರ್ಥನೆಯವರು.

೧೧. ಉಪವನ — ಮಾಧುರಿ, ಕೃಷ್ಣಸ್ವಾಮಿ, ರಂಗ, ಒಬ್ಬ, ಮತ್ತೊಬ್ಬ, ಸಂಜೀವ, ಉಳಿದ ನಟರು.

# ಅಂಕ ೨

೧. ಮನೆ — ರಂಗ, ಮುದ್ದ.

೨. ಬೀದಿ — ರಂಗ, ಬಾತ್ಮಿದಾರ.

೩. ಮನೆ — ರಂಗ, ಗೋದು.

೪. ಬೀದಿ — ರಂಗ, ಸಾಹುಕಾರ, ಹೋಟೆಲ್ ಕೀಪರ್.

೫. ಮಹಲು — ರಂಗ, ಸಂಜೀವ, ವರದ, ರಮಾನಾಥ, ಮುದ್ದ.

೬. ಉಪವನ — ಕೃಷ್ಣಸ್ವಾಮಿ, ಮಾಧುರಿ.

೭. ಮನೆ — ರಂಗ, ಗೋದು, ಬಾತ್ಮಿದಾರ, ಹುಡುಗ.

# ರಂಗಭೂಮಿ.

---

## ಅಂಕ ೧

### ದೃಶ್ಯ ೧

**—ಚಿಕ್ಕ ಮನೆಯೊಂದು. ಪಟ್ಟೇಕಚ್ಚೆಯ- ಶಾಲುಹೊದೆದ- ಬಡ ಬ್ರಾಹ್ಮಣ ರಂಗಾಚಾರಿ-ಆಕಡೆ ಈಕಡೆ ಅಡ್ಡಾಡುತ್ತಾ ಯೋಚಿಸುತ್ತಿದ್ದಾನೆ.-**

ರಂಗ—(ಒಳಗಡೆ ನೋಡಿ) ಗೋದು-! ಗೋದೂ-!! (ಉತ್ತರಬರದಿರಲು ಬೇಸರದಿಂದ) ಇಲ್ಲ. ಮಾತೇಯಿಲ್ಲ. ಬೇಡ. ಹೋಗಲಿ! (ಸಭೆಯಕಡೆ ನೋಡಿ) ನಮ್ಮ ಹೆಂಗುಸರ 'ಸತೀತ್ವ' ಅಂದ್ರೆ ಇದೇ! ಗಂಡ ಕರೆದರೆ ಮಾತಾಡಬೇಕೆಂದಿಲ್ಲ. ಗಂಡನೊಡನೆ ದಿನನಿತ್ಯವೂ ಕಾದಾಡಿ ಬಂಗಾರ-ಸೀರೆಗಾಗಿ ಚಿವುಟಿ ಮಾಂಸ ಕೀಳುತಿದ್ದರೂ ಪರವಾಯಿಲ್ಲ. ಊರೆಲ್ಲಾ ಸುತ್ತಿ ಸುತ್ತಿ ಬೇಸತ್ತು, ಮನೆಯ ಕಡೆಗೆ ಕ್ಷಣವಿಶ್ರಾಂತಿಗಾಗಿ ಬಂದಾಗಲಾದರೂ ಸ್ವಲ್ಪ ಬಾಯಿಮುಚ್ಚಿಕೊಂಡು ಸುಮ್ಮನಿರಬೇಕೆಂದು ಇಲ್ಲವೇಯಿಲ್ಲ! ಆದರೂ-ಇವರ ಸತೀತ್ವವಂತೆ! (ಬೇಸರದ ಸಿಟ್ಟಿನಿಂದ) ಬೆಂಕಿಹಾಕಿದರು ಇವರ ಸತೀತ್ವಕ್ಕೆ! ಇದಕ್ಕಿಂತ ಕಂಡವರನ್ನು ಕಾಮಿಸಿದರೂ ಚಿಂತಿಲ್ಲ- ಕ್ಷಣಕಾಲವಾದರೂ ನಗು ನಗುತ್ತಾ ಬಂದು ಮಾತಾಡಿ ಮನವೊಲಿಸುವ ಸೂಳೇರ ಕೈಹಿಡಿದರೆ ಬರುವ ಬಾಧಕವೇನಂತೆ?

(ಆ ಕಡೆ ಅಡ್ಡಾಡಿ-ಪುನಃ) ಇಲ್ಲ! ಈ ಕಾಲದಲ್ಲಿ ಸಂಸಾರ ಮಾಡಿಕೊಂಡಿರೋದೇ ಕಷ್ಟ!—ಸಾಧ್ಯವೇಯಿಲ್ಲ! ಅಲ್ಲ, ಮತ್ತೆ

ಪ್ರಾಣ ಕೈಯಲ್ಲಿ ಹಿಡಕ್ಕೊಂಡು ಊರೂರು ಸುತ್ತಿದರೂ ಒಂದು ಕಾಸು ಕೂಡ ಸಿಗೋದಿಲ್ಲ. ಏನಾದರೂ ಒಂದು ನೌಕರಿ ನೋಡೋಣಾಂದ್ರೆ ನಮ್ಮಂತ ಜಡ್ಡು ವೈದಿಕರ ಮಕ್ಕಳಿಗೆ ನೌಕರಿ ಎಲ್ಲಿಂದಬರಬೇಕು ಮತ್ತೆ–? ಕಾಲಿಕೂಲಿ ಕೆಲಸ ಮಾಡೋಣಾಂದ್ರೆ, ಬ್ರಾಹ್ಮಣಾಂತ ತಲೆಚೀಟಿಯೊಂದು ಬೇರೆ! ಹೀಗೆಲ್ಲಾ ಆದ್ರೆ ಮತ್ತೇನು ಸಾಯ್ಬೇಕಪ್ಪ?

(ಸುತ್ತು ತಿರುಗಿ) ಇದೆಲ್ಲಾ ಕಷ್ಟ ಈ ಹೆಂಗುಸರಿಗೇನು ಗೊತ್ತು? ಹುಂ! ಬರಲಿ ಹಣ! ಧರ್ಮಾವರ ಸೀರೇ ಬರ್ಲಿ–! ಕರಾಚಿ ಪಟ್ಟೇ ಬರ್ಲಿ–! ಅಂತ ಕೈನೀಡಿ ಕುಳಿತರಾಗಿಹೋಯಿತು! ಇದಿಷ್ಟನ್ನೂ ಗಂಡುಸು ಕೇಳಿಕೊಂಡು ಸುಮ್ಮನೆ ಕೂತಿರಬೇಕು! ಇಲ್ಲಾಂದ್ರೆ–ಇದೆಯಲ್ಲಾ ವರವಿದ್ಯೆ–! ಹಾರ್ಮೋನಿ ಪೆಟ್ಟಿಗೆ ಹತ್ತನೆ ಪಟ್ಟೇಲೇ ಶುರುಮಾಡಿ ಬಿಡ್ತಾರೆ ತಾರಕ ಸ್ವರ ಹಿಡಿಯೋಕೆ! (ಬೇಸರದಿಂದ) ಇಲ್ಲಪ್ಪ–ಒಟ್ನಾರೆ ಬರ್ಕತಿಲ್ಲ!

(ಯೋಚಿಸಿ) ಇದಕ್ಕಿಂತ ಹೆಂಗುಸರಿಗೆ ಪೂರ್ಣ ಸ್ವಾತಂತ್ರ್ಯಾಂತ ಮಾಡಿ ಬಿಟ್ಟಿದ್ದರೆ, ಈ ಕಷ್ಟವೆಲ್ಲಾ ಇರ್ತಿತ್ತೆ? ಬೇಕಾದ್ರೆ ದುಡಿದು ಗಳ್ಸಿಕೋತಾಳೆ- ಇಲ್ಲವಾದ್ರೆ ಸುಮ್ಮನಿರ್ತಾಳೆ. ನಮಗೇನು ಬರ್ತಿತ್ತು ಕಷ್ಟ? ಇದು ಹಾಗಲ್ಲ. ಮಾತಾಡಲಿಕ್ಕೆ ಹೋದರೆ- 'ಅಯ್ಯೋ ನಮ್ಮ ಜನ್ಮನೇ! ಹಟ್ಟಿಲಿರೋ ದನಕ್ಕಿಂತಲೂ ಕಡೆಯಪ್ಪಾ' ಅಂತ ರಾಗ! 'ಆಗಲಿ– ನಿಮ್ಮದೇ ಅಧಿಕಾರ!' ಅಂದ್ರೆ ಮತ್ತೂ ದುಡಿದು ಹಾಕ್ಬೇಕು ಗಂಡಸೇ! (ಸಿಟ್ಟುಸಿರು ಬಿಟ್ಟು)ಅಂತೂ ಗಂಡ್ಸಾಗಿ ಹುಟ್ಟೋದೇ ತಪ್ಪು!

(ಅಡ್ಡಾಡಿ) ನನ್ನ ಅವಸ್ಥೆ ನೋಡಿ. (ಅಣಕಿಸುವ ದನಿಯಿಂದ) ಉಪ್ಪಿಲ್ಲ–ಮೆಣಸಿಲ್ಲ–ಒಂದು ಸೆರೆ ಅಕ್ಕೀನೂ ಇಲ್ಲ–ನನ

ಗೊತ್ತಿಲ್ಲ. ನಾನೇನು ಅಡಿಗೆ ಮಾಡೋಹಾಗಿಲ್ಲ-! ಅಂತ ಈ ಹೊತ್ತು ಬೆಳಿಗ್ಗೆ ಮುಂಚೇನೇ ನಮ್ಮಾಕೆದ್ದು ಆರ್ಡರ್ ಪಾಸ್ ಆಗಿ ಬಿಟ್ಟಿದೆ! ಹೆಂಡತಿ ಬೈಗಳು ಕೇಳಿ ಕೇಳಿ ಸಾಕಾಗಿ ಇದ್ದದ್ದೆಲ್ಲಾ ಕೂಡಿಸಿ ಮೈಮೇಲೆ ಚಿನ್ನ ಮಾಡ್ಸಿ ಹಾಕಿದೆ- ಅಂದ್ರೆ ಮತ್ತೂ ಗೋಳುತಪ್ಪಿದ್ದೇ ಅಲ್ಲ! ಕಡೆಗೆ ಊಟಕ್ಕೇ ಸೊನ್ನೆ-! ಹೀಗೆಲ್ಲಾ ನಡ್ವರೆ, ಮತ್ತೆ ಹೇಗಿರೋದಪ್ಪ? (ಒಳಗಡೆ ನೋಡಿ) ಗೋದು-! ಗೋದೂ-! (ಉತ್ತರವಿಲ್ಲ. ಮತ್ತಷ್ಟು ಗಟ್ಟಿಯಾಗಿ) ಗೋದೂs-!

ಮಾತೇಯಿಲ್ಲ! ಬಹಳ ಸಿಟ್ಟೊಂತ ತೋರುತ್ತೆ! ಹುಂ! ಸಾಗಲಿ! ಹೀಗೇನೇ ನಮ್ಮ ಸಂಸಾರ ಸಾಗಲಿ! (ಕ್ಷಣಕಾಲ ಸುಮ್ಮನೆ- ಯೋಚಿಸುತ್ತಾ)

ಇನ್ನು ಇದರ ನಿವೃತ್ತಿಗೆ ಏನಾದರೊಂದು ಉಪಾಯ ಹುಡುಕಲೇ ಬೇಕು. ಇಲ್ಲವಾದರೆ ಸಾಧ್ಯವೇಯಿಲ್ಲ. (ಯೋಚಿಸಿ) ಹೇಳದ ಕೇಳದ ಊಟಕೆಲ್ಲಾ ದಾರಿ ಹಿಡಿಯೋಣ ಅಂದ್ರೆ- ಮತ್ತೆಲ್ಲಾ ಬೀದಿತುಂಬಾ ಶುರುಮಾಡ್ತಾರೆ- ಅಯ್ಯೋ! ಆ ಸೀನಾಚಾರಿ ಮಗ ರಂಗಾಚಾರಿ ಅವಸ್ಥೆನೇ- ಅಂತ ಮಾತಾಡ್ಲಿಕ್ಕೆ! (ಸ್ವಲ್ಪ ಧೈರ್ಯದಿಂದ) ಆದರೆ ನನಗೇನು? ಹೇಗೂ ಅಂದು ಎರಡು ವರ್ಷ ನಾಟಕ ಕಂಪಿನೀಲಿದ್ದು ಪಾಷಂಡಿ ಮತಕ್ಕೆ ಸೇರಿದವ. ಮತ್ತೇನಿನ್ನು ಮರ್ಯಾದೆ?

(ಜ್ಞಾಪಿಸಿಕೊಂಡು) ಹಾಂ! ಇದೀಗ ಹೌದು. ಇನ್ನಾದರೂ ನಾಟಕಕ್ಕೆ ಸೇರಿದರೆ ಆದೀತು. ನಮ್ಮ ಆ ಗುಬ್ಬಿ ಕಂಪಿನಿ ಇನ್ನೂ ಇದೇಂತ ತೋರುತ್ತೆ. ಹಾಗಾದರೆ- (ಯೋಚಿಸುತ್ತಾ ಖಿನ್ನನಾಗಿ)

ಆದರೆ-ಅದರಿಂದೇನು ಬಂದಹಾಗಾಯ್ತು? ದೊಡ್ಡ

ಪಾರ್ಟಿ ಮಾಡಿ ನನಗೆ ಅನುಭವ ಇಲ್ಲ. ಸಣ್ಣ ಪಾರ್ಟಿ ಮಾಡ್ತಾ ಹೋದರೆ ಸಂಬಳವೂ ಅಷ್ಟಷ್ಟೆ! ಹಾಗಾದರೆ- - ?

(ಯೋಚಿಸುತ್ತಾ-ಅಸೂಯೆಯಿಂದ) ಅಲ್ಲ–ಹಾಗಾದ್ರೆ! ಆ ಬಡ್ಡೀಮಗ ಏನು ಸಂಪಾದನ್ಕೆ ಮಾಡಿಬಿಟ್ಟ? ಅದಷ್ಟೂ ಒಂದು ನಾಟಕದ ಕಂಪಿನೀಲ್ಲಿ! ಅಬ್ಬಾ! ಅವನ ನಸೀಬೇ! (ಸುತ್ತಾಡಿ) ನಸೀಬು! ನಸೀಬು ನಮಗೂ ಬಂದೀತು. (ತರ್ಕಿಸುತ್ತ) ಏನಾದೀತು? ಹಾಂ! ಹೌದು. ಹಾಗೇ ಮಾಡಿದರೆ ಆದೀತು. ಯತ್ನ ಮಾಡೋದು. ಮನೆಯಲ್ಲಿ ಕೂತು ಹೆಂಡ್ತಿ ಬಾಯಲ್ಲಿ ಸಿಕ್ಕಿ ಸಾಯೋದಕ್ಕಿಂತ ಒಂದು ಸಾರಿ ಪ್ರಯತ್ನ ಮಾಡಿ ನೋಡೋದು! ಆದರೆ ನನ್ನ ಪುಣ್ಯ–ಹೋದರೆ ಅವಳದ್ದು- (ಒತ್ತಿ) ಆ ಶನೀದ್ದು ಗ್ರಹಚಾರ!

(ಅಧೈರ್ಯದಿಂದ) ಆದರೆ–ಆದರೆ ಯಾವುದಕ್ಕೂ ಮುಂಚೆ ಹಣಬೇಕಲ್ಲ– ಹಣ! ಅದಕ್ಕೇನು ಮಾಡೋದು? ಕಂಪಿನಿ ಇಡೋದೆಂದ್ರೆ ಅದೇನು ಸಣ್ಣಾಟವೇ? ಎಲ್ಲಾ ಹೊಸತು ತಯಾರಾಗಬೇಕು. ಏಕ್ಟರ್ಸನ್ನು ಹುಡುಕಿ ತರಬೇಕು. ಮತ್ತೆ ಅವರಿಗೆ ಎಡ್ವಾನ್ಸ್ ಬೇರೆ! ಆದಂತೂ ಈಗಿನ ಕಾಲದಲ್ಲಿ ಗಲ್ಲಿಗಲ್ಲಿಗೆ ಮೂಲೆಮೂಲೆಗೆ ಒಂದೊಂದು ನಾಟಕ ಕಂಪಿನಿ ಆಗತೊಡಗಿ, ಎಲ್ಲರಿಗೂ ನಾಲ್ಕು ನಾಲ್ಕು ಕೊಂಬು! (ಯೋಚಿಸಿ) ಆದರೂ ನೋಡಿಬಿಡೋದು.

(ಅಧೈರ್ಯದಿಂದ) ಕಂಪಿನಿ ಮಟ್ಟಿಗೆ ಹೇಗೂ ನಾನು ಸುಧಾರಿಸಿಯೇನು! (ನಗುತ್ತಾ) ಅಲ್ಲ ಮತ್ತೆ- (ಒಳಗೆ ಕೈತೋರಿಸಿ) ಇಂತಹ ರಾಕ್ಷಸೀನ ಸುಧಾರಿಸಿಕೊಂಡು ಬಂದವನಿಂದ, ಒಂದು ನಾಟಕ ಕಂಪಿನಿ ಸುಧಾರಿಸಿಕೊಂಡು ಹೋಗಲಿಕ್ಕೆ ಸಾಧ್ಯ

ವಿಲ್ಲವೆ? (ಯೋಚಿಸಿ) ಓಹೋ! ಖಂಡಿತ ಸಾಧ್ಯವಿದೆ. ಆದರೆ–ಈಗ ತೊಂದರೆ ಇಷ್ಟೆ– (ಬೇಸರದಿಂದ) ಹಣ–!

ಆದರೆ–(ಯೋಚಿಸುತ್ತ) ಆದರೆ–(ಜ್ಞಾಪಿಸಿಕೊಂಡು)ಹಾಂ! ಅದೂ ಹೌದು! ಅದೀಗ ಸರಿ! (ಖಿನ್ನವಾಗಿ) ಮಾತ್ರ ಈ ರಾಕ್ಷಸಿ ಒಪ್ಪಬೇಕಲ್ಲ! ಅವಳ ಹತ್ತಿರ ಕೇಳಿದೆನೆಂದರೆ ಮತ್ತೆ ನುಂಗಲಿಕ್ಕೇ ಬಂದಾಳು (ಧೈರ್ಯದಿಂದ) ಆದರೂ ಕೇಳಿಯೇಬಿಡ್ತೇನೆ. (ಕೆಚ್ಚಿನಿಂದ) ಅದೇನು ಅವಳ ಅಪ್ಪನ ಮನೆ ಗಂಟೇ? ನಾನೇ ಪವನಿಗೆ 15 ರೂಪಾಯಿ ಇರುವಾಗ ಮಾಡ್ಸಿದ್ದು! ಈಗ ಮಾರಾಟ ಮಾಡಿದರೆ ಒಂದೇ ಗಂಟೆನಲ್ಲಿ ಸಾವಿರ ರುಪಾಯಿ!! (ಗಟ್ಟಿಯಾಗಿ ನಕ್ಕು) ಸಾವಿರ ರೂಪಾಯಿ!! (ಸಂತೋಷಗೊಂಡು) ಹಾಂ! ನನ್ನ ನಸೀಬು ಒಂದು ರೀತೀಲಿ ಮೇಲೆದ್ದ ಹಾಗೆ ಕಾಣ್ತದೆ! ಅಯ್ಯೋ ರಂಗಾಚಾರಿ! (ಹುರುಪಿನಿಂದ) ಪ್ರೊಪ್ರೈಟರ್ ರಂಗಾಚಾರಿ! ಭೇಷ್! (ಸಂತೋಷದ ಹುಚ್ಚಿನಿಂದ ಎದೆ ಅದವಿಕೊಂಡು) ಅಯ್ಯೋ!

ಏನದು ಆ ಪದ? ನಮ್ಮ ಹಳೆ ಜಕ್ರೀದ್ದು! (ಯೋಚಿಸಿ) ಹಾಂ! ನೆನಪಾಯಿತು.

(ರಾಗವಾಗಿ - ಉತ್ಸಾಹದಿಂದ )

ಅರರೇ ಎನ್ನಯ ಸಮಾನರಾರೀ ಜಗದೊಳಗಾರಿಹರು|
ಸುರೇಂದ್ರನಂತೆ-ನರೇಂದ್ರನಂತೆ-ಮೆರೆವೆನು ನಾನೀಗ।
ಆ- - - ಅರರೇ!

(ಸಂತೋಷದಿಂದ ಗಂಟಲು ನೇವರಿಸುತ್ತಾ) ನನ್ನ ಸ್ವರ ಏನೋ ಚೆನ್ನಾಗಿದೆ. (ಹುಸಿನಗೆಯಿಂದ) ಎಷ್ಟಾದರೂ ನಾನಂದ್ರೆ ನೋಡಿ! ಹಳೆ ಅಪರಾಧಿ! ಮತ್ತೀಗ ಬಿಟ್ಟೇನೆ? ಇನ್ನಂತೂ ಚೆನ್ನಾಗಿ ಪ್ರೇಕ್ಟೀಸ್ ಮಾಡಬೇಕು. ಹೀರೋ ಪಾರ್ಟ–

(ಯೋಚಿಸುತ್ತಾ ನಿರ್ಧಾರದ ಸ್ವರದಿಂದ) ಹೀರೋ ಪಾರ್ಟು ನಾನೇ ಮಾಡ್ಬೇಕು! ಅಲ್ಲವೆ ಮತ್ತೆ! ಅದೀಗ ಭರವಸ್! (ಸಂತೋಷದಿಂದ ನಗುತ್ತ) ನನ್ನ ಈ ಸಣ್ಣ ತಲೆಯೊಳಗಿಂದ ಎಂತಹ ದೊಡ್ಡ ಯೋಚನೆಯೊಂದು ಹೊರಟುಬಿಟ್ಟಿತು? ಆಬ್ಬಾ- ನನ್ನ ತಲೆಯೇ! (ಅಭಿಮಾನದಿಂದ-) ರಂಗಾಚಾರಿ-ಪ್ರೊಪ್ರೈಟರ್ ರಂಗಾಚಾರೀದು ತಲೆ! (ಅಡ್ಡಾಡುತ್ತಾ ಸಿಳ್ಳಿನಿಂದ-)

'ಸರೋಜನ ವರಂಬಡೆದು ಸುರಾವಳಿಯಗೆಲ್ವೆ'
(ಕೊನೆಗೆ ಸರಾಗವಾಗಿ) 'ಸರೋಜನ ವರಂಬಡೆದು- - -'

ಆದಕ್ಕೊಂದು ಕೈಯಲ್ಲಿ ಖಡ್ಗ ಇರದಿದ್ರೆ ಮರ್ಝುವೇ ಇಲ್ಲ! (ಸುತ್ತಲೂ ಹುಡುಕಿ, ಒಂದು ಫುಟ್‌ರೋಲ್ ತರುವನು. ಆದನ್ನು ತಾಳದಂತೆ. ತಿರುಗಿಸುತ್ತಾ ಗಟ್ಟಿಯಾಗಿ-)

'ಸರೋಜನ ವರಂಬಡೆದು ಸುರಾವಳಿಯ ಗೆಲ್ವೆ|
ವಿರೋಧಿಗಳು ಅದಾರಿಹರು ಧರಾತಲದಿ ಕಾಣೆ,
ವಿರೋಧಿಗಳು- ವಿರೋಧಿಗಳು- ವಿರೋಧಿಗಳು ಅದಾರಿಹರು - -'

ಗೋದು—(ಸಿಡಿದುಬಂದು-ಅಬ್ಬರದಿಂದ) ಅಲ್ಲ ಮತ್ತೆ-! ನಿಮಗೇನು ತಲೇನೇ ಕೆಟ್ಟಿದೆಯೇ? ಮನೇಲಿ ಉಪ್ಪಿಲ್ಲ-ಮೆಣ್ಸಿಲ್ಲ-ಅಕ್ಕಿಯೂ ಇಲ್ಲಾಂತ ಬೆಳಿಗ್ಗೆ ಮುಂಚೆ ಹೇಳಿದ್ದ್ರೆ, ಮತ್ತೀಗ ಹುಚ್ಚರ ಹಾಗೆ ಬೊಬ್ಬೆ ಹಾಕಿಕೊಂಡು ಕುಣಿದಾಡ್ತೀರಲ್ಲ? ಏನು? ಇವೊತ್ತು ಊಟಮಾಡೋ ಅಂದಾಜಿಯೇ ಇಲ್ಲಾಂತ ಕಾಣ್ತದೆ! ಅಲ್ಲವೆ?

ರಂಗ—(ಅಂಜಿ ಮೂಲೆಗೆ ಸರಿದು-) ಯಾರಂದ್ರು

ಹಾಗಂತ? ನಾನೇನೂ ಹಾಗೆ ಹೇಳಲಿಲ್ಲ! (ಜ್ಞಾಪಿಸಿಕೊಳ್ಳುವವನಂತೆ-) ಏಕಾದಶಿ ನಾಳೆಯಲ್ಲ- ನಾಡದೂ-

ಗೋದು—(ತಡೆದು-) ಏಕಾದಶಿ! ನಿಮ್ಮ ಪಾಲಿಗೆ ನಿತ್ಯಾನೂ ಏಕಾದಶಿಯೇ! ನಿಮ್ಮ ಕೈಹಿಡಿದ ಮೇಲೆ ಒಂದಿಷ್ಟು ಸೌಖ್ಯದಿಂದ ಊಟಮಾಡಿದ್ದು ಒಂದೇ ಒಂದು ದಿನ ಆದ್ರೂ ಇದೆಯೆ? ಪಾಪಿ ಹೋದಲ್ಲಿ ಮೊಳಕಾಲು ಸಮುದ್ರಾಂತ-

ರಂಗ—(ಸ್ವಲ್ಪ ಧೈರ್ಯದಿಂದ) ಅದಕ್ಕೆ ನಾನೇನು ಮಾಡ್ಬೇಕು?

ಗೋದು—(ಸಿಟ್ಟಿನಿಂದ) ಮಾಡೋದು ಸಾವು! ನೀವು ಗಂಡುಸಾಗಿ ಯಾಕೆ ಹುಟ್ಟಿದ್ರಿ ಹೇಳಿ? ಹೆಂಡತೀನ ನೋಡಿಕೊಳ್ಳಲಿಕ್ಕೆ ಕೂಡದಿದ್ದವರಿಗೆ- ಈ ಸಂಸಾರ ಯಾಕೆ ಮತ್ತೆ? (ಬೇಸರದ ದನಿಯಿಂದ) ಅಯ್ಯೋ ನಿಮ್ಮ ಸ್ವರೂಪವೆ!

ರಂಗ—(ಉಸಿರ್ಗರೆದು) ಅದಕ್ಕೆ ನೋಡು! ಇಲ್ಲಿ ಕೇಳು- -

ಗೋದು—(ಸಿಡುಕಿನಿಂದ) ಕೇಳೋದು! ಹಾಗೆಲ್ಲಾ ಸುಮ್ಮನೆ ಕೂತು ಕೂತು ಕೇಳ್ತಾ ಬಂದದ್ರಿಂದಲೇ ನಿಮ್ಮದೀ ಅವಸ್ಥೆ. ಅಲ್ಲದಿದ್ದರೆ ಏನಾದರೊಂದು ವ್ಯಾಪ್ತಿಗೆ ಕೈಹಾಕುತಿದ್ದಿರಿ!

ರಂಗ—(ಸಂತೋಷದಿಂದ) ಅದೇ ನೋಡು! ಒಂದು ವ್ಯಾಪ್ತಿ-

ಗೋದು—ನಿಮ್ಮ ವ್ಯಾಪ್ತಿ—ಊಟದ ವ್ಯಾಪ್ತಿ! ಅದು ಕೂಡ ಯಾರಾದ್ರೂ ಎಲೆಮೇಲೆ ತಯಾರ್ಸಿ ಹಾಕಿದ್ರೆ-!

ರಂಗ—(ಸ್ವಲ್ಪ ಧೈರ್ಯದಿಂದ ಮುಂದೆ ಬಂದು) ಅಯ್ಯೋ-ಮಾರಾಯ್ತಿ! ಸ್ವಲ್ಪ ನನ್ನ ಮಾತು ಕೇಳು.

ಗೋದು—(ಹಟದಿಂದ) ಕೇಳೋದಿಲ್ಲ. ಏನ್ಮಾಡ್ತೀರಿ?

ರಂಗ—(ಸ್ವ) ಬಂತಲ್ಲ ದೊಡ್ಡ ಗ್ರಹಚಾರ! (ಸುಮ್ಮ ನಿರುವನು)

ಗೋದು—(ಸುಮ್ಮನಿರುವುದರಿಂದ ಬೇಸರಗೊಂಡು)ಆಗಲಿ ನಿಮ್ಮ ಪುರಾಣ–ನಿಮ್ಮ ವ್ಯಾಪ್ತಿ– !

ರಂಗ—(ಸಂತೋಷದಿಂದ) ಹಾಂ! ಹಾಗೆ ಬಾ ಮತ್ತೆ! ನೋಡು– ಮೊನ್ನೆ ಬಂದ ಆ ನಾಟಕ ಕಂಪೆನಿಯವ– ಏನು ದುಡ್ಡು ಮಾಡಿಬಿಟ್ಟ ಗೊತ್ತಿದೆಯೇ

ಗೋದು—(ಬೇಸರದಿಂದ) ಮಾಡಿದ್ರೆ ನಿಮಗೇನು ಬಂತು? ಮತ್ತೆ ಎಲ್ಲರೂ ನಿಮ್ಮ ಹಾಗೆ 'ಪಾಪರ'ಯಾಗಿಯೇ ಇರಬೇಕೆ?

ರಂಗ—ಅಯ್ಯೋ! ಹಾಗಲ್ಲಪ್ಪ!

ಗೋದು—(ಅಣಕಿಸುವ ದನಿಯಿಂದ) ಮತ್ತೆ ಹೇಗಪ್ಪಾ!

ರಂಗ—(ಸಿಟ್ಟಿನ ಸೋಗಿನಿಂದ) ಹಾಗಾದ್ರೆ ನಾನು ಹೇಳೋ ದಿಲ್ಲ.

ಗೋದು—(ನಿರ್ಲಕ್ಷ್ಯವಾಗಿ) ಹೇಳದಿದ್ದರೆ ಬಿಟ್ಟೀರಲ್ಲ. ಯಾರಿಗೇನು? (ಹೊರಡುವಳು)

ರಂಗ—(ತಡೆದು) ಇಲ್ಲ ಮಾರಾಯ್ತಿ! ಹೇಳ್ತೇನೆ.

ಗೋದು—(ಹಾಗೆಯೇ ನಿಂತಿದ್ದು) ಬೇಡ ಬೇಡ! ಯಾಕೆ ಸುಮ್ಮಗಾದರೂ?

ರಂಗ—(ಕೈಹಿಡಿದು) ಸಿಟ್ಟು ಮಾಡ್ಬೇಡ!

ಗೋದು—(ಕೈಕೊಸರಿಕೊಂಡು) ಅಷ್ಟೆಲ್ಲಾ ಬೇಡ ನಿಮ್ಮ ಕೊಂಡಾಟ! ಸುಮ್ಮನೆ ಹೇಳಿದರೆ ಸಾಕು.

ರಂಗ—(ಅಧಿಕಾರ ವಾಣಿಯಿಂದ) ಕೊಂಡಾಟವಾಡ್ದೆ ಮತ್ತೇನು? ನಿನ್ನನ್ನ ಮದುವೆಯಾಗ್ಲಿಲ್ಲವೆ?

ಗೋದು—(ಅಣಕಿಸುತ್ತ) ಹಾಂ! ಹೌದೇ? ಅಷ್ಟು ಜ್ಞಾಪಕವಿದೆ ಮತ್ತೆ! ಆಗಲಿ; ನನ್ನ ಪುಣ್ಯ! (ಪುನಃ ಸಿಟ್ಟಿನ ಸೋಗಿನಿಂದ) ನಾಚಿಕೆ ಆಗೋದಿಲ್ವೆ ಹಾಗೆ ಹೇಳಲಿಕ್ಕೆ?

ರಂಗ—(ಧೈರ್ಯದಿಂದ) ನಾಚಿಕೆ! ನಾಚಿಕೆಯೇನು?

ಗೋದು—ಹೊಟ್ಟೆ ತುಂಬಿಸಲಿಕ್ಕೆ ಕೂಡದವರಿಗೆ ಹೆಂಡತಿ ಮತ್ತೆ!

ರಂಗ—(ವಿಷಯವನ್ನು ತಿರುಗಿಸುವ ಯತ್ನದಿಂದ) ಅದೆಲ್ಲಾ ಬಿಡು. ಈಗ ಕೇಳು- (ಅಭಿಮಾನದಿಂದ) ನಾನೊಂದು ನಾಟಕ ಕಂಪಿನಿ ಹೊರಡಿಸಬೇಕೆಂದಿದ್ದೇನೆ. ಗೊತ್ತಿದೆಯೆ?

ಗೋದು—(ಆಶ್ಚರ್ಯದಿಂದ) ನಾಟಕ ಕಂಪಿನಿ? ಹಾಗೆಲ್ಲಾ ಹೊರಡಿಸಲಿಕ್ಕೆ ಅದೇನು ·ದಾರೀ ಮೇಲೆ ಗತಿಕೆಟ್ಟು ಬಿದ್ದು ಕೊಂಡಿದೆಯೆ?

ರಂಗ—(ಕುತೂಹಲದಿಂದ) ಅದೇನು? ನನ್ನಿಂದ ಸಾಧ್ಯ ವಿಲ್ಲಾಂತ ನಿನ್ನ ಅಂದಾಜಿಯೆ?

ಗೋದು—(ಸಾಕೂತವಾಗಿ) ಅಯ್ಯ! ನಿಮ್ಮಿಂದ ಅಸಾಧ್ಯ ವಾದ ಕೆಲಸವಾವುದಿದೆ ಹೇಳಿ?

ರಂಗ—(ಹೊಗಳಿಕೆಯೆಂದೇ ಗ್ರಹಿಸಿ-ಅಭಿಮಾನದಿಂದ) ಹಾಂ! ನನ್ನ ಗಟ್ಟಿಗತನ ನಿನಗೂ ಗೊತ್ತಿದೆ? (ತಡೆದು-ಗಂಭೀ ರವಾಗಿ) ಅದೆಲ್ಲಾ ಬಿಡು! ಈಗ ಬೇಕಾದ್ದು ನಮ್ಮ ನಾಟಕದ ವಿಚಾರ. ನಿನಗೆ ಗೊತ್ತಿದೆಯೆ? ನಾನು ಮೊದಲು ನಾಟಕದಲ್ಲೇ ಇದ್ದೆ!

ಗೋದು—(ಒಡನೆ) ಎಲ್ಲೋ ಪರದೆ ಎಳೀತಿದ್ರೀಂತ ತೋರುತ್ತೆ!

ರಂಗ—(ಸಿಟ್ಟಿನಿಂದ) ಪರದೆ ಎಳಿಯೋದೆ? ನಿನಗೇನು ಗೊತ್ತು? ಸೂತ್ರಧಾರ ಪಾರ್ಟು ಮಾಡ್ತಿದ್ದದ್ದೇ ನಾನು!

ಗೋದು—(ನಿರ್ಲಕ್ಷ್ಯವಾಗಿ) ಮತ್ತೀಗ ಭಾರಿಯಾಯಿತು!

ರಂಗ—ಭಾರಿಯಲ್ಲದೆ? ಹುಡುಗಾಟವೆ? (ಕಣ್ಣು ಅರಳಿಸಿಕೊಂಡು) ಸೂತ್ರಧಾರಾಂದ್ರೆ ನಾಟಕದ ಯಜಮಾನ! ಗೊತ್ತೇ?

ಗೋದು—(ತಿರುಗಿ ನಿಂತು) ಬೆಂಕಿಹಾಕಿದ್ರು ನಿಮ್ಮ ಯಜಮಾನಿಕೆಗೆ!

ರಂಗ—ಬೆಂಕಿಹಾಕೋದೇನಿದೆ? (ಅಭಿಮಾನದಿಂದ) ಇನ್ನಾದರೂ ನಮ್ಮ ನಾಟಕಕ್ಕೆ ನಾನೇ ಯಜಮಾನ!

ಗೋದು—ಹಾಗಾದರೆ ಬಿಡಿ. ನಾಟಕ ಆದಂತೆಯೇ ಸೈ!

ರಂಗ—(ಬೇಸರದಿಂದ) ನೀನು ಸ್ವಲ್ಪ ಸುಮ್ಮನಿರು. ನೋಡು! ನಾಟಕ ಹೊರಡಿಸ ಬೇಕಾದ್ರೆ ಸ್ವಲ್ಪ ಹಣ ಮುಂಚೆ ಬೇಕು. ಅದಕ್ಕೆ....

ಗೋದು—(ತನ್ನೊಡನೆ ಕೇಳುವನೆಂಬ ಭೀತಿಯಿಂದ) ಅದಕ್ಕೆ ಮೂರು ಸುತ್ತು ಲಾಗಹಾಕಿ ನೋಡುವ! (ಹೊರಡುವಳು).

ರಂಗ—(ತಡೆದು) ಸ್ವಲ್ಪ ನಿಲ್ಲೇ! ಅವಸರ ಏನು?

ಗೋದು—ಅಡಿಗೆ ಆಗೋದು ಬೇಡ್ವೆ ಮತ್ತೆ?

ರಂಗ—(ಉದಾರ ಬುದ್ಧಿಯಿಂದ) ಅಡಿಗೆ ಈ ಹೊತ್ತು ತಡವಾದರೂ ಚಿಂತಿಲ್ಲ. (ನಸುನಗುತ್ತಾ) ನಮ್ಮ ನಾಟಕ ಹೊರಡಿತೂಂದ್ರೆ- ಮತ್ತೆ ನಿನಗೆ ಅಡಿಗೆಮಾಡೋ ಕೆಲ್ಸವೇ ಇಲ್ಲತಾನೆ!

ಗೋದು—(ದುಃಖದ ಸೋಗಿನಿಂದ) ಅಷ್ಟು ಭಾಗ್ಯ ಇದ್ದಿದ್ದರೆ ಮತ್ತೇನು ಕಡಿಮೆಯಿತ್ತು?

ರಂಗ—ಭಾಗ್ಯಕ್ಕೆ ಏನಾಗಬೇಕು? ಈ ಆಲೋಚನೆ ಸರಿಯಾಯ್ತೂಂದ್ರೆ- ಮತ್ತೆ ಜಯಿಸಿದ ಹಾಗೇನೇ!

ಗೋದು—ಯಾವುದಕ್ಕೂ ಮುಂಚೆ ಹಣಕ್ಕೆ ಏನು ಮಾಡ್ತೀರಿ?

ರಂಗ—ಅದಕ್ಕೊಂದು ಉಪಾಯವಿದೆ. (ನಗುತ್ತಾ) ಹೇಳಿಬಿಡಲೇ? ಮತ್ತೆ ನೀನು ಸಿಟ್ಟಾಗಬೇಡ!

ಗೋದು—ನನ್ನ ಹತ್ತಿರ ಏನಾದರೂ ಇಲ್ಲ. ಮತ್ತೆ ನನಗೇನು ಸಿಟ್ಟು?

ರಂಗ—ಅದಕ್ಕೆ-(ಅಳುಕುತ್ತ) ಅದಕ್ಕೆ- (ತಡೆದು) ಪವನಿಗೆ ಈಗ ಏನು ಕ್ರಯವಿದೆ ಗೊತ್ತಿದೆಯೆ?

ಗೋದು—(ಬೇಸರದಿಂದ) ಏನೇ ಯಿರಲಿ! ನನಗೇನು? ನನಗೆ ನೀವು ಚಿನ್ನ ಮಾಡ್ಸೋದು ಅಷ್ಟರಲ್ಲೇ ಇದೆ ತಾನೆ?

ರಂಗ—ಚಿನ್ನ? ಈ ಕಾಲದಲ್ಲಿ ಚಿನ್ನಮಾಡ್ಸೋದಲ್ಲ-ಮಾರೋದು! ಏನು ಲಾಭ- ನೋಡು! (ಮರೆತವನಂತೆ) ಏನೋ ಹೇಳಬೇಕೆಂದಿದ್ದೆ- (ಜ್ಞಾಪಿಸಿಕೊಂಡು) ಹಾಂ! ಸರಿ. ಈಗ ನಮ್ಮ ನಾಟಕಕ್ಕೆ ನಿನ್ನ ಚಿನ್ನ ಎಲ್ಲಾ-

ಗೋದು—(ದಿಗಿಲು ಬಿದ್ದು) ಏನು ಮಾರೋದೆ? (ಸಿಟ್ಟಿನಿಂದ ಹೊರಟೇಹೋಗುವಳು.)

ರಂಗ—(ಬೆಂಬತ್ತಿ) ಏ! ಕೇಳೇ! ಸ್ವಲ್ಪ ಕೇಳು!

(ಉತ್ತರವಿಲ್ಲ.)

ರಂಗ—(ನಿರಾಶೆಯಿಂದ) ಪುನಃ ಬಂತು ಕಷ್ಟ! ಅವಳೇನಾದರೂ ಸಾಧಾರಣಕ್ಕೆ ಕೇಳೋ ಹಾಗೇನೇ ಕಂಡುಬರೋ

ದಿಲ್ಲ. ಮತ್ತೇನು ಮಾಡೋದು? (ಯೋಚಿಸಿ) ಆದರೂ ನೋಡೋಣ! (ನಗುತ್ತಾ) ಆ ಉಪಾಯ ನನಗೆ ಗೊತ್ತಿಲ್ಲವೆ? (ಅಭಿಮಾನದಿಂದ) ನನಗೆ! ರಂಗಾಚಾರಿ- ಪ್ರೊಪ್ರೈಟರ್ ರಂಗಾಚಾರಿಗೆ- !! (ಸಂತೋಷದಿಂದ ನಗುತ್ತಾ ತಿರುಗುವನು)

---

## ದೃಶ್ಯ ೨ (i)

(ಬೀದಿಯಲ್ಲಿ ಬೇಂಡಿನೊಂದಿಗೆ 'ಸಂಸಾರಸಂಭ್ರಮ' ಎಂಬ ಹೊಸ ನಾಟಕದ ನೋಟೀಸನ್ನು ಸಂಭ್ರಮದಿಂದ ಹಂಚುತ್ತಿರುವುದು. ಹಿಂದುಗಡೆ ಹುಡುಗರ ಗಲಭೆ)

## ದೃಶ್ಯ ೨ (ii)

—ಬೀದಿ. ರಂಗಾಚಾರಿಯ ಪ್ರವೇಶ-ದೋತ್ರಕಚ್ಚೆ-ಕೋಟು-ಟೋಪಿ-ಕೈಯಲ್ಲಿ ರಿಸ್ಟ್‌ವಾಚು—

ರಂಗ—(ಹುಸಿನಗೆಯಿಂದ) ಅಲ್ಲ ಮತ್ತೆ! ನನ್ನ ಈ ತಲೆಯ ಕುರಿತೇ ಯೋಚನೆಮಾಡ್ತಾ ಯಿದ್ದೇನೆ. ಏನು ಆಶ್ಚರ್ಯ! ನಮ್ಮಾಕೆ ಕೂಡ, ಅದರ ಮುಂದೆ ಸೋತುಹೋಗಿಬಿಟ್ಟಳಲ್ಲಾ! (ನಗುತ್ತಾ) ಈ ಹೆಂಗುಸರ ಬುದ್ಧಿ ನನಗೆ ಗೊತ್ತಿಲ್ವೆ? ಚಿನ್ನ ಸೀರೆ–ಬಿನ್ನಾಣ- ಅಂದ್ರೆ ಪ್ರಾಣ! ಈಗ ಚಿನ್ನಗಿನ್ನ ಹೋದರೆ ಏನಾಯಿತು? ಇನ್ನು ಬರ್ತ್ತದೇಂತ ಅವಳಿಗೆ ಸಂತೋಷ. (ತಲೆದೂಗಿ) ಅಲ್ಲ–ಅದು ಸಹಜವೆ. ನಾಟಕದ ಜರತಾರಿ ಸೀರೆ ಯೆಲ್ಲಾ ಅವಳ ಸ್ವಾಧೀನವೆ ಕೊಟ್ಟುಬಿಟ್ಟರೆ ಸರಿ. ಎಲ್ಲದಕ್ಕಿಂತಲೂ ಪ್ರೊಪ್ರೈಟರ್ ರಂಗಾಚಾರ್‍ರ ಹೆಂಡತೀಂತ

ಮರ್ಯಾದೆ! ಅದೇ ಮುಖ್ಯವಲ್ಲವೆ ಮತ್ತೆ? (ಸಂತೋಷದಿಂದ) ರಂಗಾಚಾರಿ- (ಮತ್ತೊಮ್ಮೆ) ಪ್ರೊಪ್ರೈಟರ್ ರಂಗಾಚಾರಿ! (ಯೋಚಿಸುತ್ತಾ) ಅದೇನು ಚೆನ್ನಾಗುವುದಿಲ್ಲ. ಹಾಗೆಲ್ಲಾ ಹಾಕಿದರೆ ನಮ್ಮವರೆಲ್ಲಾ- ಆ ಸೀನಾಚಾರಿ ಮಗ- ನಮ್ಮ ರಂಗಣ್ಣ-ಅಂತ ಬಹಳ ಸಸಾರ ಮಾಡಿಬಿಡ್ತಾರೆ! ಅದಕ್ಕೇನು ಮಾಡೋದು? (ಯೋಚಿಸಿ) ಹಾಂ! ಹೊಕ್ಕಿತು! ಹಾಕಬೇಕು ಹೀಗೆ- ಆರ್. ಎ. ಚಾರಿ!! ಅದೀಗ ಸರಿ. ಯಾರಿಗೂ ಏನಂತ ಅರ್ಥವೇ ಆಗಲಾರದು. ಎಲ್ಲ ಬಿಡಿ!- ನಮ್ಮಾಕೆ- ನಮ್ಮಾಕೆ ನನ್ನ ಡ್ರೆಸ್ ನೋಡಿಯೇ ಹೆದರಿ ಬಿಟ್ಟಿದ್ದಾಳೆ. ಇನ್ನು ಹೆಸರು ಕೇಳಿಯಂತೂ ದಿಗಿಲುಬಿದ್ದು ಎದೆ ಒಡೆದುಹೋಗದಿದ್ದರೆ ಸಾಕು! ಅದೇ ನನ್ನ ಪುಣ್ಯ!

(ಕಿಸೆಯೊಳಗಿನಿಂದ ಒಂದಷ್ಟು ಫ್ರೀಪಾಸ್‌ಗಳನ್ನು ತೆಗೆದು ತೂಗುತ್ತ) ಎಷ್ಟು ಜನರ ಪರಿಚಯ! ಈಗ ಒಂದು ತಡವೆ ಅವರ ಮನೆಬಾಗಿಲಿಗೆ ಹೋಗಿ ಬಂದರಾಯಿತು. (ಹುಸಿನಗೆಯಿಂದ) ಮತ್ತೆ ಅವರೆಲ್ಲಾ ನನ್ನ ಬಗಲೊಳಗೇನೇ! ಎಷ್ಟೆಂದರೂ ನಾವು ನಾಟಕೀ ಮನುಷ್ಯರಲ್ಲವೆ? (ಅದನ್ನು ಕಿಸೆಯೊಳಗೆ ತುರುಕುತ್ತಾ) ಇನ್ನು ಇದೆ- ನಮ್ಮ ಜಡ್ಡು ವೈದಿಕರ ಮಕ್ಕಳಿಗೆಲ್ಲಾ ಹೊಟ್ಟೆಕಿಚ್ಚು ಆಗಲಿಕ್ಕಿದೆ! (ದರ್ಪದಿಂದ) ಆದರೆ ಅದನ್ನೆಲ್ಲಾ ಯಾರು ಕೇರ್‌ಮಾಡ್ತಾರೆ? (ಕೈಯೆತ್ತಿ ಅಭಿನಯಿಸುವಾಗ- ಒಮ್ಮೆಲೆ) ಏನಿದು ಕೈಯಲ್ಲಿ? (ನಗುತ್ತಾ) ಓಹೋ! ರಿಸ್ಟ್‌ವಾಚು! ಮೊದಲು ಮೊದಲು ಕಟ್ಟಿದಾಗ ಏನೋ ಒಂದು ತರ ಆಗ್ತದೆ. ಮತ್ತೆಲ್ಲಾ ಬಿಡಿ-ಎಲ್ಲಾ ಮಾಮೂಲು! (ಗಂಟೆ ನೋಡುತ್ತ) ಗಂಟೆ- (ಅವಸರದಿಂದ) ಇನ್ನು ಯೋಚಿಸುತ್ತಾ ಕುಳಿತರೆ-! ಸಮಯ ಆಗಿಹೋಯಿತು. ಯಾವುದಕ್ಕೂ ಮೊದಲು

ಶ್ರೀನಿವಾಸರಾಯರಲ್ಲಿಗೆ ಹೋಗಬೇಕು. ನಾಡದು ನಮ್ಮ ನಾಟಕದ ದಿವಸ- ನನ್ನದೊಂದು ದೊಡ್ಡ ಭಾಷಣಬೇಕಷ್ಟೆ! ಅದಕ್ಕೆ ಅವರೊಡನೆ ಕೇಳಿ ಬರಕೊಂಡು ಬಂದುಬಿಟ್ಟೆನೆಂದರೆ- ಮತ್ತೆ ಆ ದಿವಸ ಜನರೆಲ್ಲಾ ಕೇಳಿ ಹೆದರಿಹೋಗಬೇಕು! ನಮ್ಮಾಕೆಗಂತೂ-(ಎಣಿಸುತ್ತಲೇ ಸಂತೋಷಗೊಂಡು) ಅಯ್ಯೋ! ರಂಗಾಚಾರಿ! ನಿನ್ನ ನಸೀಬೆ- -!

(ಹೆಜ್ಜೆ ಮುಂದಿಟ್ಟು ನೋಡಿ) ಯಾರದು? ಓಹೋ! ಬಾತ್ಮಿದಾರ ಪುಣ್ಯಾತ್ಮ! ಗ್ರಹಚಾರ! ಅವನಿಗೊಂದು ಪಾಸು ಕೊಡಬೇಕು. (ಹಟದಿಂದ) ಕೊಡದಿದ್ದರೆ ಏನೀಗ? ಬೇಕಾದರೆ ನಮ್ಮ ಬೆನ್ನ ಹಿಂದೆ ನಾಲ್ಕುಸಾರಿ ಕಾಕುಹಿಡೀಲಿ! ಮತ್ತೆ ನೋಡೋಣ! (ನಗುತ್ತಾ ಹೋಗುವನು—)

---

## ದೃಶ್ಯ ೩

—ಮನೆಯ ಭಾಗ ಮೂಲೆಯಲ್ಲೊಂದು ಕಡೆ ಒಂದು ಮಣೆಯ ಹೊರತು ಮತ್ತೇನೂ ಇಲ್ಲ. ರಂಗಾಚಾರಿ ಒಂದು ನೋಟೀಸನ್ನು ಮೆಲ್ಲನೆ ಓದುತ್ತಾ ಪ್ರವೇಶಿಸುವನು. (ತಿದ್ದಿದ ಪಟ್ಟೆ ಕಚ್ಚೆ. ಒಂದು ಶರ್ಟು.)

ರಂಗ—(ತಾನೇ ಆಶ್ಚರ್ಯಗೊಂಡವನಂತೆ) ಸಂಸಾರ ಸಂಭ್ರಮ- ಏನು ನಾಟಕ! ಏನು ಜನ! ಸ್ಟೇಜ್ ಎಲ್ಲಾ ಕಿಕ್ಕಿ- ಕಿಕ್ಕಿ- ಕಿಕ್ಕಿ ಇರಿದು ಹೋಗಿತ್ತು! (ನಗುತ್ತಾ) ಮತ್ತೇನು? ರಂಗಾಚಾರಿಯ ಸಾಮರ್ಥ್ಯ! (ನೋಟೀಸಿನ ಕೊನೆಯನ್ನು ನೋಡಿ ಓದುತ್ತಾ) ಪ್ರೊಪ್ರೈಟರ್-ಆರ್. ಎ. ಚಾರಿ! (ನಗುವನು.)

(ಸುತ್ತಾಡುತ್ತಾ ಯೋಚಿಸಿ) ಸಾಮಾಜಿಕ ನಾಟಕಾಂದ್ರೆ ಈ ಜನಗಳಿಗೆಲ್ಲಾ ಪ್ರಾಣಾಂತ ತೋರುತ್ತೆ. ನನಗೂ ಲಾಭವೆ. ಹೆಚ್ಚಿನ ಡ್ರೆಸ್‌ಗಳು ಬೇಡ. ಸೀನರಿ ಬೇಡ. ಅಂತೂ ಒಳ್ಳೇ ಆದಾಯ. ಆದರೆ–(ಯೋಚಿಸಿ) ಆದರೆ ಈ ಗ್ರಹಚಾರದ ಕನ್ನಡ ಭಾಷೇಲಿ ಒಳ್ಳೇ ನಾಟಕವೇ ಯಿಲ್ಲ. ಆದಕ್ಕೆ ನಮ್ಮವರಿಗೆ ತಲೆ ಇಲ್ಲಾನ್ನೋದು! ಆದಕ್ಕೇನು ಮಾಡಲಿ? (ಯೋಚಿಸಿ) ಹೌದು. ಆ ಶ್ರೀನಿವಾಸರಾಯರ ಕೂಡೆ ಒಳ್ಳೇ ಸಾಮಾಜಿಕ ನಾಟಕ ಬರೆದುಕೊಡಲಿಕ್ಕೆ ಹೇಳಿದ್ದೇನೆ. ಆದರೆ– ನಾನು ಹೇಳಿದ ಕೂಡಲೆ ಅವರಿಗೆ ತಲೆಮೇಲೆ ನಾಲ್ಕು ಕೋಡು ಬಂದುಬಿಟ್ಟಿತು. (ಅಭಿಮಾನದಿಂದ) ನಾನೇನು ಬಿಡುವ ಮಗನೆ? ಎಲ್ಲರಿಗೂ ಕಲಿಸುತ್ತೇನೆ ಬುದ್ಧಿ! (ಯೋಚಿಸಿ) ನಾನೇ ಬರೆದರಾಯಿತು. ನಾನೇ ಬರೆದು, ನಮ್ಮ ಕಂಪಿನೀಲೇ ನಾನೇ ಆಡಿಬಿಟ್ಟರೆ– ಬಹಳ ಚೆನ್ನಾಯಿತು. ಮತ್ತೆ ಅವರಿಗೆಲ್ಲಾ ದಮ್ಮಯ್ಯ ಗುಡ್ಡೆ ಹಾಕೋ ಅಗತ್ಯವೇ ಇಲ್ಲಾಷ್ಟೆ?

(ಎರಡು ಸುತ್ತು ತಿರುಗಿ) ಹೌದು. ಬರೆದೇ ಬಿಡ್ತೇನೆ. ಕಾಗದ ಲೇಖನಿ ಹಿಡಿದ ಕೂಡಲೇ ಬಂದೇಬರ್ತದೆ ಸ್ಫೂರ್ತಿ! (ಹೋಗಿ ಕಾಗದ ಲೇಖನಿ ತಂದು, ಮಣೆಯನ್ನು ಮುಂದಿಟ್ಟು ಕುಳಿತು ಯೋಚಿಸುತ್ತಾ ಬಗೆಹರಿಯದೆ) ಏನಂಶ ಬರೆಯಲಿ? ಆಲೋಚನೆಯೇ ಮುಂದೆ ಹೋಗೋದಿಲ್ಲ. (ಜ್ಞಾಪಿಸಿಕೊಂಡು) ಓಹೋ! ತಿಳೀತು! ಇದೇ ಮೋಸ- ಕಾಫಿ ಕುಡೀದಿದ್ರೆ ಸ್ಫೂರ್ತಿ ಹೇಗೆ ತಾನೆ ಬಂದೀತು? ಹೌದು. ಅದೀಗ ಮುಖ್ಯ! (ಒಳಗಡೆ ನೋಡಿ)

ಗೋದೂ–!

ಗೋದು—(ಒಳಗಿನಿಂದ) ಯಾಕೆ? ಬಂದೆ.

ರಂಗ—(ನಗುತ್ತಾ, ಸ್ವ.) ನೋಡಿದಿರಾ? ನಮ್ಮಾಕೆ ಈಗ ಎಷ್ಟು ಮೆತ್ತಗಾಗಿಬಿಟ್ಟಿದ್ದಾಳೆ! ಕರೆಯೋದೇ ತಡ- ಎಲ್ಲಿದ್ದರೂ ಓ ಅಂತಾಳೆ! ಈಗೀಗ ಇದೆಲ್ಲಾ ಸತೀತ್ವ ಎಲ್ಲಿಂದ ಬಂದು ಬಿಟ್ಟಿತೋ- ಆ ಪರಮಾತ್ಮನಿಗೇ ಗೋಚರ! (ಜ್ಞಾಪಿಸಿಕೊಂಡು) ಹಾಂ! ಇದೇ ವಿಚಾರ ನಾಟಕ ಬರೆದು ಬಿಟ್ರೆ ಏನಾಗುತ್ತದೆ? ಹೌದು ಒಳ್ಳೇ ವಿಷಯ. ಯಾವುದಕ್ಕೂ ಕಾಫಿಯಾಗಲಿ-ಮತ್ತೆ ನೋಡೋಣ!

ಗೋದು—(ಮೊದಲಿನಷ್ಟು ಬಡತನದ ವೇಷವಿಲ್ಲ-ಪ್ರವೇಶಿಸಿ) ಕರೆದಂತಾಯಿತಲ್ಲ-

ರಂಗ—ಹೌದು. ಒಂದು ಲೋಟಾ ಕಾಫಿ.

ಗೋದು—(ಆಶ್ಚರ್ಯದಿಂದ) ಏನು? ಕಾಫಿ! ಹಾಗೆಲ್ಲಾ ಕಾಫಿ ಕುಡೀತಾ ಇದ್ದರೆ ಯಾಕಾದೀತು?

ರಂಗ—ಆಗೋದೇನು? ನಿಮಗೆಲ್ಲಾ ಭ್ರಮೆ! ಮತ್ತೂ ನೋಡು- ಒಂದು ನಾಟಕ ಬರೆಯುತೊಡಗಿದ್ದೇನೆ.

ಗೋದು—(ಆಶ್ಚರ್ಯದಿಂದ) ನಾಟಕ!

ರಂಗ—(ನಸುನಗುತ್ತ) ಹೌದೇ!

ಗೋದು—ಯಾರು? ನೀವೇ!

ರಂಗ—(ಅಭಿಮಾನದಿಂದ) ನಿನಗೇನೋ ನನ್ನ ವಿಚಾರವೆಲ್ಲಾ ಭಾರೀ ವಿಚಿತ್ರವಾಗಿ ಕಾಣತೊಡಗಿದೆ. ಅಲ್ವೆ? (ಕಣ್ಣು ಅರಳಿಸಿಕೊಂಡು) ಎಲ್ಲ ಬಿಡು. ನನಗೇನೇ ಕೆಲವು ತಡವೆ ಹಾಗೆ ಆಗ್ತದೆ- ಅಂದ್ರೆ! (ನಸುನಗುತ್ತಾ) ಇನ್ನೆಲ್ಲಾ ಹಾಗೇನೇ. ಯಾವುದಕ್ಕೂ ಮುಂಚೆ ಕಾಫಿಯಾಗಲಿ. ಇಲ್ಲವಾದರೆ ನಾಟಕ ಬರಿಯೋ ಹಾಗೇನೇ ಇಲ್ಲ!

ಗೋದು—ಎಂತಹ ನಾಟಕಾಂದ್ರೆ?

ರಂಗ—ನಾಟಕ ಭಾರೀ ತಮಾಷೆಯಿದೆ. ಅದರಲ್ಲೊಬ್ಬ ಪಿರ್ಕಿ-

ಗೋದು—(ತಾತ್ಸಾರದಿಂದ) ಇಸ್ಸಿಯಪ್ಪ! ಅದೇಕೆ?

ರಂಗ—(ಹೆಮ್ಮೆಯಿಂದ) ಆ ಪಾರ್ಟು ನಾನೇ ಮಾಡ್ತೇನೆ ನೋಡು. ಅದೇನು ಗೊತ್ತೆ?

ಗೋದು—(ಕುತೂಹಲ) ಏನು?

ರಂಗ—ನನಗೆ ಪಿರ್ಕೀ ಪಾರ್ಟು ಚೆನ್ನಾಗಿ ಹಿಡೀತದಂತೆ!

ಗೋದು—ಯಾರಂದದ್ದು?

ರಂಗ—ನಮ್ಮ ನಾಟಕದವರು.

ಗೋದು—(ತಲೆದೂಗಿ) ಹಾಂ! ಅದಿರಬಹುದು.

ರಂಗ—ಅದೇನು ಹೇಳು?

ಗೋದು—ನಿಮಗೆ ಅದರ ಸಂಸ್ಕಾರ ಚೆನ್ನಾಗಿದೆ.

ರಂಗ—(ಅಭಿಪ್ರಾಯ ತಿಳಿಯದೆ ನಗುತ್ತ) ನಿನಗೆ ಅದು ಹೇಗೆ ಗೊತ್ತು?

ಗೋದು—ನಿಮ್ಮ ರೂಪು ನೋಡಿದ ಕೂಡಲೇ ಗೊತ್ತಾದು! (ನಗುವಳು)

ರಂಗ—(ಸಿಟ್ಟಿನಿಂದ) ನೋಡು! ನೀನು ಹಾಗೆಲ್ಲಾ ಆಡಿದ್ರೆ ನನಗೆ ಮತ್ತೆ ಸಿಟ್ಟುಬಂದೀತು! ನಾನೇನೀಗ ಮೊದಲಿನ ಗೊಡ್ಡು ಬ್ರಾಹ್ಮಣಾಂತ ಎಣಿಸಬೇಡ. (ಸ್ವಲ್ಪ ಮೆತ್ತಗಾಗಿ) ಕಾಫಿ ತಾ ಬೇಗ!

ಗೋದು—(ಹೋಗುವಳು)

ರಂಗ—(ಸ್ವ) ಈ ಹೆಂಗುಸರಿಗೆ ಹಾಗೆಲ್ಲಾ ಸಲುಗೆ ಕೊಡಬಾರದು. ಎಷ್ಟು ಬೇಕೋ ಅಷ್ಟೇ ಮಾತು. ನಾನು ಕೂಡ ಇನ್ನು ಸ್ವಲ್ಪ ಬಿಞುಸಾಗಿರಬೇಕು.

(ಏನೋ ಯೋಚಿಸಿ- ಹೊರಗೆ ನೋಡಿ ಕರೆಯುವನು) ಮುದ್ದ!

ಮುದ್ದ—(ಸುಮಾರು 22 ವರ್ಷದವ.- ಉಡುಪು:- ಅರ್ಧ ಚಲ್ಲಣ- ಶರ್ಟು-ಪ್ರಕೃತ ನಾಟಕದ ಕೆಲಸದಾಳು)

(ಅವಸರದಿಂದ ಬಂದು ಕೈಮುಗಿದು) ಏನಪ್ಪಣೆ?

ರಂಗ—(ಸಂತೋಷದಿಂದ) ಭೇಷ್! ಒಳ್ಳೇ ಚಲಾಕಿ ದ್ದಿಯ! ಪರವಾಯಿಲ್ಲ. ನಿನಗೂ ನಾಟಕದಲ್ಲಿ ಒಂದು ಸೇವಕನ ಪಾರ್ಟು ಕೊಡೋಣ. ಇದನ್ನೆ ಸ್ವಲ್ಪ ಪ್ರಾಕ್ಟೀಸ್ ಮಾಡಿಕೊ. ನಾನು ಕರೀತೀನೆ- ಇನ್ನೊಮ್ಮೆ ಬಾ ನೋಡೋಣ.

ಮುದ್ದ—(ಹೋಗುವನು)

ರಂಗ—(ದರ್ಪದಿಂದ) ಯಾರಲ್ಲಿ?

ಮುದ್ದ—(ಬಂದು ನಮಸ್ಕರಿಸಿ) ನಾನು ಸ್ವಾಮಿ! ಏನಪ್ಪಣೆ?

ರಂಗ—(ತಲೆದೂಗಿ) ಚಿಂತಿಲ್ಲ. ಆದರೆ ಇನ್ನೂ ಸ್ವಲ್ಪ ವಿನಯ ನಾಜೂಕಾಗಿರಬೇಕು. ನೋಡು- ನಾನು ಮಾಡಿ ತೋರಿಸ್ತೇನೆ. ನೀನು ಇಲ್ಲಿ ನಿಂತಿರು. (ಹೋಗುವನು)

ಗೋದು—(ಕಾಫಿತರುವಳು)

ರಂಗ—(ಹೊರಗಿನಿಂದ) ಯಾರಲ್ಲಿ ಕೇಳೋ!

ಗೋದು—(ಆಶ್ಚರ್ಯದಿಂದ) ಯಾರಲ್ಲಿ?

ರಂಗ—(ವಿನಯದಿಂದ ಬಗ್ಗಿಕೊಂಡು ಬಂದು, ನೆಲ ಮುಟ್ಟಿ ಸಲಾಮುಮಾಡಿ) ನಾನು ಸ್ವಾಮಿ! (ಕೈಮುಗಿದು) ಏನಪ್ಪಣೆ?

ಗೋದು—(ನಾಚುಗೆಯಿಂದ) ಇಸ್ಸಿಯಪ್ಪ! ಏನಿದು ಹುಚ್ಚಾಟ!

ರಂಗ—(ನೋಡಿ ಆಶ್ಚರ್ಯಗೊಳ್ಳುವನು)

ಮುದ್ದ—(ನಗುವನು)

ರಂಗ—(ಸಿಟ್ಟಿನಿಂದ) ಕತ್ತೆ! ಹೋಗೋ ಆ ಕಡೆ! ನಗುತ್ತಾನೆ ಮತ್ತೆ!

ಗೋದು—ಹೀಗೆಲ್ಲಾ ಮಾಡಿದರೆ ನಗದೆ ಮತ್ತೇನು ಮಾಡ್ಬೇಕು? ಅಳಬೇಕೆ?

ರಂಗ—(ಸೋತ ಬೆಪ್ಪುತನದಿಂದ) ನೀನು ಸುಮ್ಮನಿರು. ಎಲ್ಲಾ ಕೆಡಿಸಿಬಿಟ್ಟೆ. ಇನ್ನು ನಾಟಕ ಬರಿಯೋ ಹಾಗೇನೇಯಿಲ್ಲ. ಆದರೂ ಚಿಂತಿಲ್ಲ. ಕಾಫಿಕೊಡು. (ತೆಗೆದುಕೊಂಡು ಕುಳಿತು- ಮುದ್ದನ ಕೂಡೆ) ಈ ಕಾಗದ ಎಲ್ಲಾ ಆ ಕೋಣೆಯೊಳಗೆ ಇಟ್ಟುಬಿಡು.

ಮುದ್ದ—(ಕೊಂಡುಹೋಗುವನು)

ರಂಗ—(ಕಾಫಿ ಕುಡಿಯುತ್ತಾ) ಹೇಗೆ ಹೇಳು ನಮ್ಮ ನಾಟಕ ನಿನ್ನೆ? ನಿನ್ನ ಕೂಡೆ ಕುಳಿತವರು ಮೆಜಿಸ್ಟ್ರೇಟರ ಹೆಂಡತಿ!

ಗೋದು—(ಆಶ್ಚರ್ಯದಿಂದ) ಹಾಂ!

ರಂಗ—(ಹೆಮ್ಮೆಯಿಂದ) ಮತ್ತೆ! ನಿನ್ನ ಭಾಗ್ಯ ನೋಡೇ!

ಗೋದು—ನಿನ್ನೆ- ಆ ವಕೀಲರ ಪಾರ್ಟು ಮಾಡಿದ್ದು ಯಾರು?

ರಂಗ—ಅವನೇ? ಅವ ಮೈಸೂರು ಕಡೆಯವ- ಕೃಷ್ಣಸ್ವಾಮಿಯಂತ. ಹೇಗಾಗಿತ್ತು?

ಗೋದು—ಬಹಳ ಚೆನ್ನಾಗಿತ್ತು. ಒಳ್ಳೇ ಸಲಕ್ಷಣ ಹುಡುಗ.

ರಂಗ—ಅದಕ್ಕೆ ಅವನಿಗೆ 'ನಟಭೈರವಾ'ಂತ ಟೈಟಲ್ ಇದೆ!

ಗೋದು—ಹಾಗಂದ್ರೆ?

ರಂಗ—(ಕೈತಿರುಗಿಸಿ) ಯಾರಿಗೆ ಗೊತ್ತು! (ನಸು ನಗುತ್ತಾ) ಇನ್ನೊಂದು ಜನ ಬಂದದೆ ನಮ್ಮ ಕಂಪಿನೀಗೆ!

ಗೋದು —ಯಾವ ಪಾರ್ಟಿಗೆ?

ರಂಗ—ಸ್ತ್ರೀಪಾರ್ಟಿಗೆ.

ಗೋದು—(ಆಶ್ಚರ್ಯದಿಂದ) ಟೀಪಾರ್ಟಿಗೆ! ಅಂದ್ರೆ?

ರಂಗ—ಅಲ್ಲವೆ! ಸ್ತ್ರೀ- ಪಾರ್ಟಿಗೆ!

ಗೋದು—ಅದಕ್ಕೆ ತುಂಬಾ ಜನ ಇದೆಯಲ್ಲ?

ರಂಗ—ಅದೆಲ್ಲಾ ಹುಡುಗರಾಯಿತು.

ಗೋದು—ಇದು ಮತ್ತೆ?

ರಂಗ—(ನಗುತ್ತಾ) ಹುಡುಗಿ!

ಗೋದು—(ಆಶಂಕೆಯಿಂದ) ಅಯ್ಯೊ! ನಿಮಗೇನು ಹುಚ್ಚು ಹಿಡೀತೆ?

ರಂಗ—ಅದೆಲ್ಲಾ ನಿನಗೇನು ಗೊತ್ತು? ಕಂಪಿನೀಲಿ ಹುಡುಗಿಯರಿದ್ದರೇನೇ ಮಝು! ನಾಲ್ಕು ಕಾಸು ಆಗ್ತದೆ!

ಗೋದು—ಕಡೆಗೆ ಕಂಪಿನಿ ದಿವಾಳಿಯೂ ಆಗ್ತದೆ!

ರಂಗ—ಅದೆಲ್ಲಾ ನಿನ್ನಂತವರು ಮೂಳೆಯಿಲ್ಲದಿದ್ದವರು ನಾಟಕ ಕಂಪಿನಿ ನಡ್ಸಿದರೆ ಮಾತ್ರ ಹಾಗಾದೀತಷ್ಟೆ!

ಗೋದು—ಏನಪ್ಪ! ನನಗೇಕೋ ಸಂಶಯ ಆಗ್ತದೆ. ಯಾರು? ನೀವೇ ಕರ್ಸಿದ್ದೆ? (ನಸುನಕ್ಕು ಓರೆನೋಟ ಬೀರುವಳು)

ರಂಗ—(ಅರ್ಥವರಿತು) ಛೀ! ಹಾಗೇನೂ ಇಲ್ಲವೆ! ಹುಚ್ಚಿ! ನೋಡು- ನಾಳೆ ಈ ಕಡೆ ಕರೆದುಕೊಂಡು ಬರ್ತೇನೆ. ಒಳ್ಳೇ ಚೆಂದ ಇದ್ದಾಳೆ!

ಗೋದು—(ಅಸೂಯೆಗೊಂಡು) ಇರಲಿ! ನನಗೇನು? (ಲೋಟಿ ಹಿಡಿದುಕೊಂಡು ಹೊರಡುವಳು.)

ರಂಗ—(ಎದ್ದು ನಿಂತು) ಏ! ಜೊತೇಲಿ ಈ ಮಹೇನ ಒಳಗೆ ಕೊಂಡುಹೋಗಿಬಿಡು.

ಗೋದು—ಬೇಕಾದರೆ ನೀವೇ ತನ್ನಿ ನೋಡೋಣ! (ಹೋಗುವಳು)

ರಂಗ—(ಉಪಾಯವಿಲ್ಲದೆ ಹಿಡಿದುಕೊಂಡು) ಏನು ಮಾಡೋದು? ಊರಿಗೆ ಅರಸಾದರೂ ಹೆಂಡತಿಗೆ ಗುಲಾಮು! (ಒಳಗೆ ಹೋಗುವನು.)

---

## ದೃಶ್ಯ ೪

—ನಾಟಕದವರ ಬಿಡಾರ. ಸಾಮಾನುಗಳೆಲ್ಲಾ ಅಲ್ಲಲ್ಲಿ ಚೆಲ್ಲಿಕೊಂಡಿವೆ. ಒಂದು ಕಡೆ ಅರ್ಧ ಬಿಡಿಸಿದ ಹಾಸುಗೆಯ ಮೇಲೆ ವರದರಾಯ ಒರಗಿರುವ. ಅವನ ಕಾಲಬಳಿ ಸಂಜೀವರಾಯ. ಸ್ವಲ್ಪ ದೂರದಲ್ಲಿ ರಮಾನಾಥರಾಯ ಕಾಲುಚಾಚಿ ಕುಳಿತಿರುವ. ಎಲ್ಲರ ಕೈಯಲ್ಲಿಯೂ ಒಂದೊಂದು ಪುಸ್ತಕ. ದೃಷ್ಟಿ ಮತ್ತೊಂದು ಕಡೆ ಕುಳಿತಿರುವ ಮಾಧುರಿಯ ಮೇಲೆ! ದೂರದಲ್ಲಿ ಮುದ್ದ ಸಿಳ್ಳುಹಾಕುತ್ತ ಸಾಮಾನುಗಳನ್ನು ಕೂಡಿಡುತ್ತಿರುವ. ಅಂತೂ ಪ್ರೇಕ್ಷೀಸಿನ ಸಂಭ್ರಮ!—(ಎಲ್ಲರದೂ ನಿತ್ಯದ ವೇಷ)

ವರದ—(ಒಂದು ಸೊಲ್ಲನ್ನು ಬಾಯಿಪಾಟ ಮಾಡುವವನಂತೆ- ಮಧ್ಯೇ ಮಧ್ಯೇ ಮಾಧುರಿಯನ್ನು ನೋಡುತ್ತ)

ಪ್ರಿಯೆ! ಮಾತನಾಡಲಾರೆಯೇಕೆ? ಇದೇನಿಷ್ಟು ಕೋಪ? ಪ್ರಣಯ ಜೀವಿಗಳಿಗೆ ಕೋಪವೆಂಬುದು ಮುಳ್ಳಿನಂತೆ! ಸಂಸಾರದಲ್ಲಿ ಸಾರಸುಧೆಯನ್ನು ಕುಡಿದು ಕುಣಿದಾಡುವೆವೆಂದು ಬಗೆದು

ಬೆರೆತ ಜೀವಿಗಳಿಗೆ-ಅದರ ಬಾಧೆಯೇಕೆ? ನೋಡು-! ಚೆಂದುಟಿಗಳಲ್ಲಿ ನಗೆ- ಕಣ್ಣುಗಳಲ್ಲಿ ಒಲವನ್ನು ಹೊರಹೊಮ್ಮಿಸಿ, ಈ ಕಡೆ ನೋಡು! ದೇವಿ- - -

ರಮಾ—(ತಡೆದು) ಒಲವೆಂದರೇನ್ರೀ?

ವರದ—(ಬೇಸರದಿಂದ) ಸುಮ್ಮನಿರೋ! ಕೇಳೋಕೊಂದು ಸಮಯಾನೂ ಇಲ್ವೆ?

(ರಂಗಾಚಾರಿ ಪ್ರವೇಶಿಸುವನು. ಉಡುಪು:- ದೋತ್ರದ ಕಚ್ಚೆ- ಶರ್ಟು- ಶಾಲು- ಎಲ್ಲರೂ ಸರಿಯಾಗಿ ಕುಳಿತುಕೊಳ್ಳುವರು. ಮುದ್ದ ಒಂದು ಕುರ್ಚಿಯನ್ನು ಮುಂದೆಳೆದಿಡುವನು.)

ರಂಗ—(ಸುತ್ತಲೂ ನೋಡಿ- ಮಾಧುರಿಯನ್ನು ನೋಡುವಾಗ ದೃಷ್ಟಿ ಕೂಡುವುದು. ಆಕೆ ಮೊಗ ತಗ್ಗಿಸುವಳು) ಏನು ಪ್ರಾಕ್ಟೀಸ್ ನಡೆದುಹೋಯಿತೆ?

ವರದ—ಓಹೋ! ಎಲ್ಲಾ ಮುಗಿದು ಹೋಯಿತು.

ರಂಗ—ಕೆಲವರು ಬಂದಿಲ್ಲವಲ್ಲ?

ಸಂಜೀವ—ಅದೆಲ್ಲಾ ಸುಧಾರಿಸಿಕೊಂಡು ಹೋಯಿತು.

ರಂಗ—ಅಂದ್ರೆ?

ಸಂ—ಎಲ್ಲಾ ಮುದ್ದ ಓದಿಬಿಟ್ಟ.

ರಂಗ—(ನೋಡಿ) ಕೃಷ್ಣಸ್ವಾಮಿ ಏನು ಬರ್ಲಿಲ್ಲ?

ಸಂ—ಯಾರಿಗೆ ಗೊತ್ತು!

ರಂಗ—(ದರ್ಪದಿಂದ) ಪ್ರಾಕ್ಟೀಸ್ ಇದೇಂತ ಗೊತ್ತಿಲ್ವೆ?

ಮುದ್ದ—ನಾನು ತಿಳ್ಸಿದ್ದೆ ಸ್ವಾಮಿ!

ರಂಗ—ಏನಂದ್ರು ಅದಕ್ಕೆ?

ಮುದ್ದ—ಹೋಗೋ! ಆದ್ರೆ ಬರ್‍ತೇನಂದ್ರು!

ರಂಗ—(ಕ್ಷಣಕಾಲ ಸುಮ್ಮನಿದ್ದು) ಈಯಮ್ಮಣ್ಣೀಗೆ ಪಾರ್ಟು ಬರೆದು ಕೊಟ್ಟಿಯೋ ರಮಾನಾಥ!

ರಮಾ—ಹೌದು ಸಾರ್! ಈಗ ಒಂದು ತಡವೆ ಓದಿದ್ರು.

ರಂಗ—(ಆಕೆಯನ್ನು ನೋಡಿ- ಮೆತ್ತಗೆ) ಹೇಗೆ- ಓದುವಂತಿದೆಯೆ?

ಮಾದು—(ಲಜ್ಜೆಯಿಂದ ತಲೆಬಾಗಿ) ಹೌದು. ಅಕ್ಷರ ಚೆನ್ನಾಗಿದೆ.

ರಮಾ—(ಹೆಮ್ಮೆಯಿಂದ) ಚೆನ್ನಾಗಿರದೆ? ನಾನು ಬರ್ದದ್ದಲ್ವೆ?

ರಂಗ—ಆಗಲಿ. ಅದರದೊಂದು ಪೀಸ್ ಆಕ್ಟುಮಾಡಿ ನೋಡೋಣ! (ವರದನೊಡನೆ) ಅದರ ಹಿಂದಿನ ಮಾತು ನೀನು ಓದೋ!

ವರ—(ಪುಸ್ತಕ ತೆಗೆದು-ತಾನು ಬಾಯಿಪಾಟ ಮಾಡುತ್ತಿದ್ದದನ್ನೇ) ಪ್ರಿಯೆ! ಮಾತನಾಡ- - -

ರಂಗ—(ಸಿಟ್ಟಿನ ಸೋಗಿನಿಂದ) ಹೇ! ಸಾಕು ಬಿಡೋ! ಬೇಡ. (ಆಕೆಯೊಡನೆ) ನಿಮ್ಮದು ಮಾತ್ರ ಓದಿದ್ರೆ ಸಾಕು.

ಮಾದು—(ಪುಸ್ತಕ ತೆಗೆದು ಓದುವಳು)

ಹಾ! ದೈವವೆ! ನಿನ್ನ ಕೋಪಾಗ್ನಿಗೆ ಇಂತಹ ಅಬಲೆಯರನ್ನು ಗುರಿಮಾಡುವೆಯೇಕೆ?-

ರಂಗ—ಅದನ್ನೇ ಆಕ್ಟ್ಮಾಡಿ ತೋರಿಸಿ ನೋಡೋಣ!

ಮಾದು—(ಮಾಡುವಳು)

ರಂಗ—ಹಾಗಲ್ಲ. (ಹತ್ತಿರ ಸರಿದು) ಎದೆಗೆ ಕೈ ಆನಿಸಿಕೊಳ್ಳಬೇಕು.

ಮಾದು—(ಹಾಗೆಯೇ ಮಾಡುವಳು.)

ರಂಗ—ಹುಂ! ಅದೀಗ ಸರಿ. ಮುಂದಕ್ಕೆ-?

ಮಾಧು—(ಓದುವಳು) ಈ ಸಂಹಾರದ- - -

ಸಂ—ಹಾಗಲ್ಲ. ಬೇರೆ ಏನೋ ಇದ್ದಿರಬೇಕು.

ರಮಾ—(ಉತ್ಸಾಹದಿಂದ) ನಾನು ತೋರ್ಸ್ಸಿಕೊಡ್ತೇನೆ. ಕೈ ಮಿಸ್ಟೇಕ್ ಆಗಿದ್ದೋ ಏನೋ (ಎದ್ದು ಹತ್ತಿರ ಹೋಗುವನು.)

ರಂಗ—(ಸಿಟ್ಟಿನಿಂದ) ಹೋಗೋ ಕತ್ತೆ! ಆಕೆಗೆ ಕಣ್ಣು ಕಾಣ್ಸತ್ತೆ.

ರಮಾ—(ಬಂದು ಸಂಜೀವನನ್ನು ಕಂಡು ಕಣ್ಣು ಮಿಟಕಿಸಿ ಕುಳಿತುಕೊಳ್ಳುವನು.)

ರಂಗ—(ಮಾಧುರಿಯೊಡನೆ) ಈಗ ಸಾಕು. ನಾಲ್ಕು ಕಡವೆ ನೋಡಿ ಸರಿಮಾಡಿಕೊಳ್ಳಿ. (ಉಳಿದವರೊಡನೆ) ಇನ್ನು ನಾಲ್ಕು ದಿವಸದೊಳಗೆ ಎಲ್ಲಾ ಕಂಪ್ಲೀಟ್ ಆಗಬೇಕು!- (ಯಾರದೂ ಉತ್ತರವಿಲ್ಲ.)

ರಂಗ—ಹಾರ್ಮೋನಿ ಮಾಸ್ಟರು ಬಂದಿಲ್ಲವೆ?

ವರ—ಬಂದು ಹೋದರು. ಹೋಟೆಲಿಗೆ ನುಗ್ಗಿದರೋ ಏನೋ!

ರಂಗ—(ಸ್ವಲ್ಪ ಹೊತ್ತು ಯೋಚಿಸಿ) ಮುದ್ದಾ- ಆ ಹಾರ್ಮೋನಿ ಪೆಟ್ಟಿಗೆ ಬರ್ತಾ ಮನೆಗೆ ತಂದುಬಿಡು. (ಮಾಧುರಿಯೊಡನೆ) ನೀವು ಕೂಡ ಸಂಜೆ ನಮ್ಮಲ್ಲಿಗೇ ಬಂದುಬಿಡಿ. ಅಲ್ಲೇ ಪದದ ಟ್ರೈಯಲ್ ಮಾಡಿದರಾಯಿತು-ಮತ್ತು ಏಕ್ಟಿಂಗ್ ವಿಷಯ ಕೆಲವು ಹಿಂಟ್ಸ್ ಕಲ್ತುಕೋಬೇಕು. ಅದು ಬಹಳ ಮುಖ್ಯ ನೋಡಿ! ಅದಕ್ಕೆ ಆ ಕಡೇನೇ ಬಂದು ಬಿಟ್ರೆ ಸರಿಹೋಗ್ತದೆ. (ಹೊರಟು) ನೀವಿನ್ನು ಬಿಡಾರಕ್ಕೆ ಹೋಗಿ. (ಹೋಗುತ್ತಾ

ನಿಂತು- ಮೆಲ್ಲನೆ) ಮುದ್ದಾ- ಬರ್ತಾ ಎರಡು ಚೆಂಡು ಮಲ್ಲಿಗೆ ಹೂ ತಂದುಬಿಡು! (ಆಕೆಯ ಕಡೆ ದೃಷ್ಟಿಬೀರಿ ಹೋಗುವನು)

ಮಾದು—(ತನ್ನ ಪುಸ್ತಕ ಹಿಡಿದುಕೊಂಡು ಹೋಗುವಳು.)

ಸಂ—(ನಗುತ್ತಾ) ಏನಯ್ಯ ರಾಮು! ಆದಷ್ಟು ಹತ್ತಿರ ಸರಿದುಕೊಳ್ತೇನೆಂತ ಎಣ್ಸಿದ್ದಿ ಅಲ್ವೆ?

ರಮಾ—ಹೌದು ಮಾರಾಯ! ಆದರೂ ಆ ಬ್ರಾಹ್ಮಣ ಬಿಡಲಿಲ್ಲವಲ್ಲ!

ವರ—ಪ್ರೊಪ್ರೈಟರ್ ಸಾಹೇಬರಲ್ಲವೆ? ಅಂದ್ರೆ-ಅದೆಲ್ಲಾ ಆವರ ಪ್ರೋಪರ್ಟಿ!

ಸಂ—ಅದೆಲ್ಲಾ ಹೋಗಲಿ! ನಮ್ಮ ಭೈರವ ಏನು ಬಂದಿಲ್ಲ ಹೇಳು? ಅವನಿಗೆ ತಿಳಿದಿಲ್ಲವೋ ಏನೋ!

ಮುದ್ದ—ನಾನು ತಿಳ್ಸಿದ್ದೆ.

ಸಂ—ನೀನು ಟ್ರಿಯಲಿದೇಂತ ಮಾತ್ರ ತಿಳ್ಸಿದ್ದು- ಒಂದು ಚಿನ್ನದ ಗುಬ್ಬಿ ಇದೇಂತ ಹೇಳಿದ್ರೆ ಓಡಿಬರ್ತಿದ್ದ!

ವರ—ಅದಕ್ಕೆ ನೋಡು! ನಾನು ಮೂರು ಗಂಟೇಗೇ ಓಡಿ ಬಂದಿದ್ದೆ! ಈಗ ಹೋಗಿ ಕೃಷ್ಣಸಾಮಿಗೆ ತಿಳ್ಸೋಣವೆ?

ರಮಾ—ಅದು ಹೌದು. ಸ್ವಲ್ಪ ಹೊಟ್ಟೆ ಉರ್ಸಿಕೊಳ್ಳಲಿ! ತಿಳ್ಸಿಬರೋಣ. (ಮುದ್ದನ ಹೊರತು, ಎಲ್ಲರೂ ನಗುತ್ತಾ ತೆರಳುವರು.)

---

## ದೃಶ್ಯ ೫

—ಬೀದಿ—ಸಂಜೀವ- ವರದ- ರಮಾನಾಥರ ಪ್ರವೇಶ—

ಸಂ—ಆಗಲಿ! ನಮ್ಮ ಪ್ರೊಪ್ರೈಟರ್ ಭಲೇ ಗಟ್ಟಿಗನಯ್ಯ!

ವರ—ಅದರಿಂದಲೇ ಹಕ್ಕಿಯನ್ನ ಮನೇಗೇ ಸಾಗಿಸಿ ಕೊಂಡು ಹೋಗಿಬಿಟ್ಟ!

ರಮಾ—ಅದು ಬೇಕಾದರೆ ಕೊಂಡುಹೋಗಲಿ. ಆದ್ರೆ ನನ್ನನ್ನ ಹತ್ತರ ಸರೀಲಿಕ್ಕೂ ಬಿಡಲಿಲ್ಲವಲ್ಲಾಂತ ಹೊಟ್ಟೆ ಯುರಿ!

ಸಂ—ಕೃಷ್ಣಸಾಮಿ ಕೇಳಿದ ಮೇಲಂತೂ ಅಳಲಿಕ್ಕೇ ಇದ್ದಾನೆ—!

ವರ—(ಮುಂದೆ ನೋಡಿ) ನೋಡಯ್ಯ! ಒಳ್ಳೇ ಆಯು ಸ್ಸಿದೆ ಆ ಪ್ರಾಣಿಗೆ. ಈ ಕಡೆ ಬರ್‍ತಾ ಇದ್ದಾನಲ್ಲ.

ಸಂ—(ನೋಡಿ) ಓಹೋ! ಹೌದು!

ಕೃಷ್ಣ—(ಪ್ರವೇಶಿಸುವನು. ಸುಂದರ ಯುವಕ. ಉಡುಪು:- ಪೈಜಾಮ- ಸಿಲ್ಕಿನ ಶರ್ಟು- ಕನ್ನಡಕ ಇಟ್ಟುಕೊಂಡಿದ್ದಾನೆ.)

ಸಂ—ಯಾಕೆ ಬರಲಿಲ್ಲೋ? ಈ ಹೊತ್ತು ಟ್ರಯಲಿಗೆ?

ಕೃಷ್ಣ—(ನಿರ್ಲಕ್ಷ್ಯವಾಗಿ) ಸುಡುಗಾಡಿನ ಟ್ರಯಲು! ಬರದಿದ್ದರೆ ಏನು ಹೋಯ್ತೀಗ?

ವರ—ಹೋಗೋದು ಬಿಟ್ಟು ಬಂತಲ್ಲ ಈಗ! ನಿನ್ನ ಪುಣ್ಯ ನೋಡಯ್ಯ!

ಕೃಷ್ಣ—ಅಂತಹ ಪುಣ್ಯ ಏನು ಬಂತೀಗ?

ವರ—ಬರಬೇಕಾದ್ದೆ ಬಂದುಬಿಟ್ಟಿತು! ಹೀರೋಯಿನ್ ಪಾರ್ಟಿಗೆ ಒಂದು ಹೊಸ ಜನ ಬಂತು ಕಣೋ!

ಕೃಷ್ಣ—(ಬೇಸರದಿಂದ)ಯಾರು ಬಂದರೇನು? ಪ್ರಿಯೇಂತ ಒಂದು ತಡವೆ ಕೈಹಿಡಿವಾಗಲೇ ಮತ್ತೆ ಬೇಡಾಂತ ಕಂಡು ಹೋಗ್ತದೆ.

ಸಂ—ಅದಕ್ಕೇನೇ ಈಗ ನಿನ್ನ ಪುಣ್ಯಾಂತಂದದ್ದು!

ಕೃಷ್ಣ—ಎಂಥದೋ ನಿಮ್ಮ ಭಾಷೆ! ನನಗೆ ಅರ್ಥವೇ ಆಗೋದಿಲ್ಲ.

ರಮಾ—ಮತ್ತೇಕೆ ಈ ಹೊತ್ತು ಟ್ರಯಲಿಗೆ ಬರಲಿಲ್ಲ ಹೇಳು? ಬಂದಿದ್ದರೆ ಎಲ್ಲಾ ಗೊತ್ತಾಗುತಿತ್ತು ತಾನೆ!

ಸಂ—ಆದರೆ, ಇನ್ನು ಮುಂದೆ ಮಾತ್ರ ನಡುಮಧ್ಯಾಹ್ನಕ್ಕೇ ಬಂದು ಹಾಜರಿರ್ತಾನೆ!

ವರ—ಸುಮ್ಮಗಾದರೂ ಒಗಟು ಮಾತಾಡಿ ಅವನ ತಲೆ ಚಿಟ್ಟೇ ಹಿಡ್ಸೋದು ಯಾಕೆ? (ಕೃಷ್ಣಸ್ವಾಮಿಯೊಡನೆ) ಕೇಳಯ್ಯ! ನಮ್ಮ ಕಂಪಿನಿಗೊಂದು ಹುಡುಗಿ ಬರುತ್ತೇಂತ ಹಮಾಮಿ ಯಿತ್ತಲ್ಲ-ಅದು ಬಂದೇ ಬಿಟ್ಟಿತು!

ಕೃಷ್ಣ—(ಆಶ್ಚರ್ಯ-ಸಂತೋಷದಿಂದ) ಯಾವಾಗಲೋ?

ವರ—ಇವೊತ್ತು ಬೆಳಿಗ್ಗೆ.

ಕೃಷ್ಣ—ಟ್ರಯಲಿಗೂ ಬಂದಿತ್ತೆ?

ರಮಾ—ಅದೇ ಹೇಳೋದು ಮತ್ತೀಗ!

ಕೃಷ್ಣ—(ಪಶ್ಚಾತ್ತಾಪದಿಂದ) ಅಯ್ಯೋ! ಮೋಸ ವಾಯ್ತಲ್ಲೋ! ನನಗೆ ಗೊತ್ತೇ ಇದ್ದಿಲ್ಲ. ಕೊನೆಗೀಗ ಮಾಲು ಎಲ್ಲಿಗೆ ಹೋಯ್ತೊ?

ಸಂ—(ನಗುತ್ತ) ಮತ್ತೆಲ್ಲಿಗೆ? ಮಾಲು ಹೋಗೋದು ಮಾಲಿಕರಲ್ಲಿಗೆ!

ಕೃಷ್ಣ—(ಆಶ್ಚರ್ಯದಿಂದ) ಯಾಕೆ?

ಸಂ—ಯಾಕಂದ್ರೆ– ಆಕ್ಟಿಂಗ್‌ನ ವಿಷಯ ಹಿಂಟ್ಸ್ ಹೇಳ್ಸಿ ಕೊಳ್ಳಲಿಕ್ಕೆ!

ಕೃಷ್ಣ—ಹೇಳಿಕೊಡೋದು ಯಾರು ಮತ್ತೆ?

ವರ—ಅವರೇ ಸ್ವತಃ!

ಕೃಷ್ಣ—ಯಾರು? ರಂಗಾಚಾರ್‍ರೇ!

ವರ—ಹೌದಯ್ಯ! ಏನು ಭಾರೀ ಆಶ್ಚರ್ಯ?

ಕೃಷ್ಣ—ಅಲ್ಲವೋ ಮತ್ತೆ! ಅದೇನು ವೈದಿಕದ ಮಂತ್ರವೆ? (ಎಲ್ಲರೂ ನಗುವರು.)

ಕೃಷ್ಣ—(ನಗುತ್ತಾ) ಹಾಗಾದರೆ ನನಗೂ ಕಲಿಬೇಕಾಯ್ತಲ್ಲ.

ರಮಾ—ನಿನಗೆ ಕಲಿಸುವವರು ಯಾರೂಂತ ಆಗಬೇಕಲ್ಲ!

ಕೃಷ್ಣ—ಯಾರೂಂದ್ರೆ? ಅವರೇ ಸ್ವತಃ ನೋಡು! ಅಲ್ಲಿಗೇ ಹೋಗ್ತೇನೆ!

ಸಂ—(ನಗುತ್ತ ಬೆನ್ನು ಚಪ್ಪರಿಸಿ) ಏನೋ! ಈಗಾಗಲೇ ಬೆನ್ನುಹತ್ತ ತೊಡಗಿದೆ?

ಕೃಷ್ಣ—ಮತ್ತೆ! ನನ್ನ ಹೀರೋಯ್ನ್ ನಾನು ನೋಡಿ ಶಿಫಾರಸು ಮಾಡೋದು ಬೇಡ್ವೆ?

ವರ—ಬೇಡ. ನೀನಷ್ಟು ಕಷ್ಟಪಡೋದು ಬೇಡ. ಅದಕ್ಕೆಲ್ಲಾ ಬೇರೆ ಜನ ಇದೆ.

ಕೃಷ್ಣ—ಆದರೂ ಒಂದು ಚಾನ್ಸ್!

ರಮಾ—ಹಾಗಾದ್ರೆ ನಾವೂ ಬರ್‍ತೀವಿ.

ಕೃಷ್ಣ—ಬೇಡ ಬೇಡ. ಏನೂ ಬೇಡ! (ಹೋಗುವನು. ಉಳಿದವರು ನಗುತ್ತ ಹಿಂದೆ ತೆರಳುವರು.)

---

## ದೃಶ್ಯ ೬

—ರಂಗಾಚಾರಿಯ ಮನೆ. ಮನೆಯಲ್ಲಿ ಮೊದಲಿನ ಬಡತನವಿಲ್ಲ. ಒಂಟಿಕಾಲಿನ ದುಂಡು ಮೇಜೊಂದು. ಮೂರು ಕುರ್ಚಿಗಳು—

ರಂಗ—(ಮಾಧುರಿಯೊಡನೆ ಪ್ರವೇಶಿಸಿ- ಕುರ್ಚಿಯೊಂದನ್ನು ಎಳೆದು ಮುಂದಿಟ್ಟು) ಕುಳಿತುಕೊಳ್ಳಿ.

ಮಾದು—(ಕಡೆಗಣ್ಣಿನಿಂದ ನೋಡಿ- ನಸುನಗುತ್ತ) ಆಗಲಿ; ನೀವು ಕುಳಿತುಕೊಳ್ಳಿ. (ಇದಿರಿಗಿದ್ದ ಮೇಜಿಯ ಒಂದು ಪಕ್ಕದಲ್ಲಿ ಕೈಯಿಟ್ಟು ಮೈಕೊಂಕಿಸಿ ನಿಲ್ಲುವಳು. ಭಾರ ತಾಳಲಾರದೆ ಮೇಜು ಮಾಲುವುದು. ಅಷ್ಟರಲ್ಲಿ ರಂಗಾಚಾರಿ ಅವಳ ಕೈಸಮೇತ ಅದನ್ನು ಹಿಡಿದು ಸರಿಗೊಳಿಸಿದ ಮೇಲೂ ಕೈಬಿಡದಿರುವನು)

ಮಾದು—(ಮುಗುಳ್ನಗುವಳು.)

ರಂಗ—(ಹಾಗೆಯೇ.)

(ಪರಸ್ಪರ ದೃಷ್ಟಿಕೂಡುವುದು. ಒಳಗಡೆ ಏನೋ ಸದ್ದು ಕೇಳಿಬರಲು ಕೈಬಿಟ್ಟು- ಸರಿದುನಿಂತು)

ರಂಗ—ಗೋದೂ!

ಗೋದು—(ಒಳಗಿನಿಂದಲೇ) ಯಾಕೆ? ಬಂದೆ.

ಮಾದು—(ವೈಯಾರದಿಂದ) ಅಂದ್ರೆ ಯಾರು?

ರಂಗ—ನಮ್ಮ ಕುಟುಂಬ.

ಗೋದು—(ಬಂದು ಆಕೆಯನ್ನು ನೋಡಿ ಆಶ್ಚರಿಗೊಂಡು ಸುಮ್ಮನಿರುವಳು)

ಮಾದು—ಏನವ್ವ?

ಗೋದು—ಒಳ್ಳೇದು. (ಗಂಡನ ಮುಖ ನೋಡುವಳು.)

ರಂಗ—(ನಸುನಗುತ್ತ) ನೋಡೇ! ಮೊನ್ನೆ ಹೇಳಿದ್ದೆ ನಲ್ಲ-ನಮ್ಮ ಕಂಪಿನೀಗೆ ಹೊಸಬರು ಬರ್‍ತಾರಂತ- ಅವರೇ ಇವರು.

ಗೋದು—ಹೌದೇ! (ಅವಳೊಡನೆ) ತಮ್ಮ ಹೆಸರೇನು?

ಮಾದು—ಮಾಧುರೀಂತ. ನೀವು ಹಾಗೆಲ್ಲಾ ಹೇಳಬೇಕಾ ಗಿಲ್ಲ. ಮಾದೂಂತ ಕರೆದ್ರೂ ಹಿತವಾಗಿರುತ್ತೆ.

ಗೋದು—ಆಗಲಿ. ನಿಂತಿದ್ದೀರಲ್ಲ?

ಮಾದು—ಪರವಾಯಿಲ್ಲ.

ಗೋದು—(ಹೊರಟು) ಕೂತಿರಿ. ಒಂದಿಷ್ಟು ಬಾಯಾ ರಿಕೆಗೆ ತಯಾರಿಸ್ತೇನೆ.

ಮಾದು—ಬೇಡಿ- ಬೇಡಿ! ಏಕೆ ಸುಮ್ಮಗಾದರೂ ಪ್ರಯಾಸ?

ಗೋದು—(ಹೋಗುತ್ತ) ಹಾಗೇನಿಲ್ಲ. (ಹೋಗುವಳು.)

ರಂಗ—(ಕುಳಿತುಕೊಂಡು) ಸುಮ್ಮನೆ ನಿಂತಿರಲ್ಲ?

ಮಾದು—(ಕುಳಿತುಕೊಳ್ಳುವಳು.)

ರಂಗ—ನೀವು-

ಮಾದು—(ತಡೆದು) ಬೇಡಿ. ನೀನೂಂತ ಹೇಳಿದರೇನೇ ಸಾಕು.

ರಂಗ—ಆಗಲಿ. ಮೊದಲಿದ್ದುದು ಯಾವ ಕಂಪಿನೀಲಿ?

ಮಾದು—ಧಾರವಾಡದ ಕಡೆ- ಮಲ್ಲಿಕಾರ್ಜುನ ಕಂಪಿ ನೀಂತ.

ರಂಗ—ಆಗಲಿ. ನಿಮ್ಮಂತವರು ರಂಗಭೂಮಿಯ ಸೇವೆಗೆ ಕೈಹಚ್ಚಿ, ನಾಟ್ಯಕಲೆಯ ಉದ್ಧಾರಮಾಡತೊಡಗಿದ್ದು ನಿಜ ವಾಗಿಯೂ ನಮ್ಮ ಭಾಗ್ಯವೇ ಸರಿ!

ಮಾದು—ಎಲ್ಲಾನೂ ನಿಮ್ಮಂತವರ ಅನುಗ್ರಹ! (ಓರೆ ನೋಟ ಬೀರಿ ಮುಗುಳ್ನಗುವಳು.)

ರಂಗ—(ಅಂತೆಯೇ) ನೋಡೋಣ! ನಿಮ್ಮ ಪಾರ್ಟಿನ ಪುಸ್ತಕ.

ಮಾದು—(ಕೈಮುಟ್ಟಿ ಕೊಡುವಳು)

ರಂಗ—(ತೆರೆದು) ಹಾಂ! ತೆಗೆದ ಕೂಡಲೇ ಒಳ್ಳೇದೇ ಸಿಕ್ಕಿತು. ಇದು ಆಕ್ಟುಮಾಡಲಿಕ್ಕೆ ಬಹಳ ಕಷ್ಟದ ಭಾಗ ನೋಡಿ! ಮೂರ್ಛೆ ಬೀಳೋದಂದ್ರೆ ನಿಮ್ಮ ಕಡೆ ಹೇಗೆ ಆಕ್ಟು ಮಾಡ್ತೀರಿ? ಕೊಂಚ ತೋರಿಸಿ ನೋಡೋಣ!

ಮಾದು—(ನಾಚುವಳು.)

ರಂಗ—ಅದಕ್ಕೇನು? ನಾವೇ ಅಷ್ಟೆ! ಬೀಳೋದು ಬೇಡ-ಅಂದ್ರೆ ನಾನು ಹಿಡೀತೇನೆ!

ಮಾದು—(ಕಣ್ಣು ಮುಚ್ಚಿ ಕಾಲುಗಳನ್ನು ಒಂದಾಗಿ ನಿಲ್ಲಿಸಿ, ಕೈಗಳನ್ನು ಜೋಲುಬಿಟ್ಟು ಬೀಳುವಳು.)

ರಂಗ—(ಮಧ್ಯದಲ್ಲಿ ಆತುಕೊಂಡು ಅಂತೆಯೇ ಮುಖವನ್ನು ಸಾಕೂತವಾಗಿ ನೋಡುತ್ತಿರುವನು- ಕೈಬಿಡುವುದರೊಳಗಾಗಿ)

ಕೃಷ್ಣ—(ಅನಿರೀಕ್ಷಿತವಾಗಿ ಪ್ರವೇಶಿಸಿ) ಅಯ್ಯೋ! ಗ್ರಹಚಾರವೆ! ಬಾಗಿಲ ಕಡೆ 'ನೋ ಎಡ್ಮಿಷನ್ ವಿದೌಟ್ ಪರ್ಮಿಶನ್' ಅಂತ ನೋಟೀಸಾದರೂ ಅಂಟಿಸಬಾರದಾಗಿತ್ತೆ? (ಹಿಂದೆ ತೆರಳುವನು.)

ರಂಗ—(ಬೇಸರದಿಂದ) ಒಟ್ಟಾರೆ ಒಳ್ಳೆ ಕೆಲಸಗಳಿಗೆ ಎಲ್ಲಿ ಹೋದರೂ ವಿಘ್ನಗಳೇ!

ಗೋದು—(ಬಂದು) ಬನ್ನಿ; ಈ ಕಡೆಗೇ ಬಂದು ಬಿಡಿ! (ಮಾಧುರಿಯನ್ನು ಕರೆದುಕೊಂಡು ಹೋಗುವಳು)

ರಂಗ—(ನಗುತ್ತ) ಇಂತಹ ಚಿನ್ನದಂತಹ ಹುಡುಗಿ ಬಗ ಲೊಳಗೆ ಬೀಳಬೇಕಾದರೆ ಎಷ್ಟು ಪುಣ್ಯ ಮಾಡಿರೋದು ಬೇಡ! ಅಂತೂ ರಂಗಾಚಾರೀದು ನಸೀಬು! (ನಗುತ್ತ ಒಳಗೆ ಹೋಗು ವನು)

---

## ದೃಶ್ಯ ೭

ಬೀದಿ. ನಟಭೈರವ ಕೃಷ್ಣಸ್ವಾಮಿ ಪ್ರವೇಶಿಸುವನು—

ಕೃಷ್ಣ—(ಪಶ್ಚಾತ್ತಾಪದಿಂದ) ಛೇ! ಅನ್ಯಾಯವಾಗಿ ಹೋಯಿತು! ಆ ಬೇಟೆ ಅನ್ಯಾಯವಾಗಿ ಬೇರೆಯವರ ಕೈಯೊ ಳಗೆ ಬಿದ್ದುಹೋಗಿಬಿಟ್ಟಿತು. ಹುಡುಗಿ ಪರವಾಯಿಲ್ಲ. ಶಾನೆ ಸೊಗಸಾಗಿದ್ದಾಳೆ. (ಬೇಸರದಿಂದ) ಆ ಮುದಿ ಜಾಂಬವ ಅದನ್ನು ಹೊತ್ತುಬಿಟ್ಟನಲ್ಲ?

(ಯೋಚಿಸಿ) ಏನೇ ಆಗಲಿ! ಅಂತೂ ಒಂದು ಕೈ ಸಾಧಿ ಸಿಯೇ ಬಿಡಬೇಕು. ಮತ್ತೇನು? ಈ ಕಂಪೆನಿಯೊಂದು ಬಿಟ್ಟು ಹೋಗೋದು ಬಂದೀತು! ಅಷ್ಟೆ ತಾನೆ? (ಉಪಹಾಸದಿಂದ) ನಮಗೇನು? ನಮ್ಮ ಕಸಬು ನಮ್ಮ ಬಳಿ ಚೆನ್ನಾಗಿದ್ದ ಮೇಲೆ ಎಲ್ಲಿಹೋಗಿ ಸೇರಿದರೂ ನಮಗಿದ್ದೇ ಇದೆ ಡಿಮಾಂಡ್! ಚಿಂತಿಲ್ಲ. ಹುಡುಗಿಯೇನೋ ಚೆನ್ನಾಗಿದ್ದಾಳೆ (ಹೆಮ್ಮೆಯಿಂದ) . ನಮ ಗೇನು ಅದೊಂದು ದೊಡ್ಡ ಕೆಲಸವೆ? ನೂರಾರು ಕಡೆ ತಿರುಗಿ ಇಂತಹ ಎಷ್ಟೋ ಹಕ್ಕಿಗಳನ್ನು ಹಾರಿಸಿಬಿಟ್ಟ ಮಹಾನುಭಾವರು ನಾವು! ಅಂದ್ರೆ– ನಮ್ಮ ಕುಲವಿದ್ಯೆ ಅದೊಂದ್ರೂ ಸರಿಹೋ ಗ್ತದೆ! ಎಂದಮೇಲೆ ಈ ಹಾರುವನ ಬಳಿ ನಮ್ಮ ಚಾಲಾಕಿ

ತೋರಿಸೋದು ಅದಾವ ದೊಡ್ಡ ಮಾತು? (ಹುಸಿನಗೆಯಿಂದ) ಪಾಪ! ಅವ ಎಣಿಸಿಕೊಂಡಿದ್ದಾನೆ- ಹುಡುಗಿ ತನ್ನನ್ನು ಮೋಹಿಸಿಬಿಟ್ಟದೆ. ತಾನಂದ್ರೆ ಪ್ರಾಣ! ಅಂತ. ಆದರೆ- ಈ ನಾಟಕದ ಡಿಪಾರ್ಟ್ಮೆಂಟಿನ- ಈ ನಾಟಕೀ ಮನುಷ್ಯರ ಚಮತ್ಕಾರ ಆ ಪೆದ್ದಂಬಟ್ಟನಿಗೇನು ಗೊತ್ತು? ಅದರಲ್ಲೂ ಇಂತಹ ಸೂಳೇರ ಮರಿಗಳೋ! ನೋಡುವುದೊಬ್ಬರನ್ನ- ಮಾತಾಡಿಸೋದು ಇನ್ನೊಬ್ಬರನ್ನ—ಕೂಡೋದು ಮತ್ತೊಬ್ಬರನ್ನ—ಕೊನೆಗೆ ಓಡಿ ಹೋಗೋದು ಯಾರ ಕೂಡೇನೋ ಏನೋ! (ನಗುತ್ತಾ) ಅಂದ್ರೆ ಇಷ್ಟೆ! ಕೊನೆಗೆ ಗಂಟುಬೀಳುವವರೊಂದ್ರೆ ನಾವೇ!

ಆಗಲಿ. ಇದೂ ಒಂದು ನೋಡಿಬಿಡೋಣ! ಹತ್ತರ ಮೇಲೆ ಹನ್ನೊಂದು! (ಹೋಗುತ್ತಾ) ಏನದು ಸದ್ದು? (ಜ್ಞಾಪಿಸಿಕೊಂಡು) ಓಹೋ! ಈ ಹೊತ್ತು ರಾತ್ರಿ ನಾಟಕ ಅದೆ. ನನಗದರ ಸ್ಮರಣೆಯೇ ಬರಲಿಲ್ಲ. ಅಹುದು- ಸತೀಧರ್ಮ- ಸತೀಧರ್ಮ ನಾಟಕ. (ನಗುತ್ತಾ) ನಮ್ಮಂಥಾ ಪುಣ್ಯಾತ್ಮರು ಊರೊಳಗೆ ಹೆಚ್ಚುತ್ತಾ ಬಂದ ಹಾಗೆ ಇಂತಹ ಸತೀಧರ್ಮದ ನಾಟಕಗಳನ್ನೇ ಹೆಚ್ಚಾಗಿ ತೋರಿಸುತ್ತಾ ಬರ್ಬೇಕ್ರೀ! ಇಲ್ಲವಾದರೆ- ನಮ್ಮ ಚಾಳಿ ನಮ್ಮ ಹೆಂಡರೀಗೂ ಹತ್ತಿಬಿಟ್ಟರೆ—?

(ನೋಡಿ) ಯಾರದು ಹೋಗ್ತಿರೋದು? ಸೀನೂಂತ ಕಾಣ್ತದೆ. (ಈಕ್ಸಿಸಿ) ಅಹುದು. ಅವನೇ! (ಕೈಚಪ್ಪಾಳೆ ತಟ್ಟಿ) ಲೋ! ನಾನೂ ಬರ್ತೀನಿ; ನಿಲ್ಲೋ! (ಸ್ವಗತ) ಈಗ ಒಂದು ಡೋಸ್ ಹೊಡೆದು ಗರಮ್ ಮಾಡ್ಕಿದ್ರೆ ಈ ಹೊತ್ತಿನ ರಾತ್ರಿ ನಿದ್ದೆಗೆಡುವಂತೆಯೇ ಇಲ್ಲ. (ಆ ಕಡೆ ನೋಡಿ) ನಿಲ್ಲೋ! ನಾನೂ ಬಂದೆ!—(ಹೋಗುವನು)

## ದೃಶ್ಯ ೮

—ರಂಗಭೂಮಿ. ನಟರೆಲ್ಲಾ ಪಾತ್ರವಹಿಸಲು ಸಿದ್ಧರಾಗಿರುವರು— ರಮಾನಾಥ- ಸೀರೆ ತೊಡುತಿರುವನು. ವರದರಾಯ- ಟ್ರೌಸರ್ಸ್ ಹಾಕಿಕೊಳ್ಳುತಿರುವನು. ಸಂಜೀವ ರಾಯ- ಬಣ್ಣ ಹಾಕಿಕೊಳ್ಳುತಿರುವನು. ಕಸೆ-ಅಂಗಿ ತೊಟ್ಟ ಚಿಕ್ಕ ಹುಡುಗಿಯೊಬ್ಬಳು- ಶರ್ಟು- ಅರ್ಧ ಚಲ್ಲಣ-ಗಾಂಧಿ ಟೋಪಿ ಇಟ್ಟುಕೊಂಡ (ಎಲ್ಲವೂ ಬಿಳಿಯವು) ಹುಡುಗನೊಬ್ಬ-ಒಂದು ಕಡೆ ನಿಂತಿರುವರು. ಇನ್ನು ಕೆಲವು ಹುಡುಗರು ಆ ಕಡೆ ಈ ಕಡೆ ಓಡಾಡುತಿರುವರು. ಮಾಧುರಿ- ಆಕಾಶ ನೀಲಬಣ್ಣದ ಸಿಲ್ಕಿನ ಸೀರೆಯನ್ನು ಉಟ್ಟು ಅಲಂಕೃತಳಾಗಿ ಹೆರಳುಹಾಕುತಿರುವಳು. ಮುದ್ದ- ಎಲ್ಲರ ಕಡೆಯೂ ಸುಳಿದಾಡುತ್ತ ಬೇಕಾದ ವಸ್ತುಗಳನ್ನು ಒದಗಿಸಿಕೊಡುತ್ತಿರುವನು.

ವರದ—(ಬೇಸರದಿಂದ) ಇದೊಂದು ಕೆಲಸಕ್ಕೆ ಬಾರದ ಚಲ್ಲಣ! ಒಂದೇ ಒಂದು ಗುಂಡಿಯಾದರೂ ಇದರಲ್ಲಿಲ್ಲ. ಮುದ್ದಾ! ಎರಡು ಪಿನ್ ಕೊಡೋ ಈ ಕಡೆ!

ಮುದ್ದ—(ತಂದು ಕೊಡುವನು)

ಸಂ—(ಬಣ್ಣ ಮುಗಿಸಿ) ನನ್ನ ಕೂಂಬ್ ಎಲ್ಲಿಯದೆ?

ರಮಾ—ಅಲ್ಲೇ ಕೆಳಗಡೆ ಇಟ್ಟಿದ್ದೇನೆ ನೋಡು!

ವರ—(ಗುಂಡಿಹೋದಲ್ಲಿ ಪಿನ್ ಹಾಕಿಕೊಳ್ಳುತ್ತ) ಹಾದೇನೋ! ಕೃಷ್ಣಸಾಮಿ ಇನ್ನೂ ಬಂದಿಲ್ಲವೇನು?

ಸಂ—ಏನಪ್ಪ! ಇನ್ನೂ ಬಂದಿಲ್ಲ. ಟ್ಯಾಮಾಯಿತಲ್ಲ?

ವರ—ಆವಾಗಲೇ ಒಂಭತ್ತುವರೆ ಮಿಕ್ಕಿಹೋಗಿದೆ.

ಸಂ—ಮತ್ತೇನು ಇನ್ನೂ ಬರಲಿಲ್ಲ?

ಮುದ್ದ—ಸ್ವಲ್ಪ ಮುಂಚೆ ಸೀನಪ್ಪನೊಡನೆ ಪೇಟೇಲಿ ಅಡ್ಡಾಡುತಿದ್ದ.

ಸಂ—ಯಾವ ಸೀನಪ್ಪ?

ಮುದ್ದ—ಆ ಸೂಳೇರ ಕೇರಿ ಸೀನಪ್ಪ!

ರಂಗ—(ಪ್ರವೇಶಿಸುವನು) ದೋತ್ರ–ಕೋಟು-ವಾಕಿಂಗ್ ಸ್ಟಿಕ್.)

ರಂಗ—(ಮಾಧುರಿಯ ಬಳಿ ಸರಿದು– ಇತರರು ಕೇಳ ದಂತೆ) ಈ ಸೀರೆ ಬಹಳ ಚೆನ್ನಾಗಿ ಒಪ್ಪುತದೆ.

ಮಾದು—(ಸೆರಗನ್ನು ಮರೆಮಾಡಿಕೊಂಡು ನಸುನಗುತ್ತ) ನನಗೂ ಈ ಕಲರ್ ಬಹಳ ಇಷ್ಟ!

ರಂಗ—ಹೌದೇ? ಹಾಗಾದರೆ ಅಂಗಡೀಲಿ ವಿಚಾರ್ಸ್ತೀಣ. (ದರ್ಪದಿಂದ ಸುತ್ತಲೂ ನೋಡಿ) ಕೃಷ್ಣಸಾಮಿ ಎಲ್ಲಿಯೋ?

ಮುದ್ದ—ಇನ್ನೂ ಬಂದಿಲ್ಲಪ್ಪ!

ರಂಗ—(ಆಶ್ಚರ್ಯದಿಂದ) ಏನು? ಬಂದಿಲ್ಲ! (ಸಿಟ್ಟಿನಿಂದ) ಅವನಿಗೇನು ತಲೆಕೆಟ್ಟಿದೆಯೆ? ಸಂಜೆ ಪ್ರಾಕ್ಟೀಸಿಗೂ ಬಂದಿಲ್ಲ. ಈಗಲೂ ಕಾಣೆ! ಗಂಟೆ ಎಷ್ಟಾಯಿತೋ ಮುದ್ದ-!

ಮುದ್ದ—9¾ ಮೀರಿಹೋಯಿತು.

ರಂಗ—(ಗಾಬರಿಯಿಂದ) ಮೀರಿಹೋಯಿತು? ಹಾಗಾದರೆ ಮತ್ತೆಲ್ಲಿಗೆ ಹೋದ? (ಸೈರಣೆಗೆಟ್ಟು ಅತ್ತಿತ್ತ ತಿರುಗಾಡುವನು)

ಮುದ್ದ—ಸ್ವಾಮಿ! ಫಸ್ಟ್ ಬೆಲ್ ಬಡಿಯೋದೆ?

ರಂಗ—(ಮೆಲ್ಲನೆ) ಹುಂ! ಬಡಿದುಬಿಡು. ಹೊಸ ನಾಟಕ. ಜನರನ್ನೆಲ್ಲಾ ಸುಮ್ಮನಾದರೂ ಕೂಳ್ಳಿರಿಸುವಂತಿಲ್ಲ. (ಫಸ್ಟ್ ಬೆಲ್ ಆಗುವುದು)

ರಂಗ—(ಸೈರಣೆಗೆಟ್ಟು ಸಿಟ್ಟಿನಿಂದ) ಇನ್ನೂ ಇಲ್ಲ. ಮುಠ್ಠಾಳ! ಎಲ್ಲಿ ಸತ್ತ ಹಾಗಾದರೆ? (ಸುತ್ತಾಡುತ್ತಾ) ಮುದ್ದಾ!

ಮುದ್ದ—ಸ್ವಾಮಿ!

ರಂಗ—ಬಿಡಾರದ ಕಡೆ ಹೋಗಿ ಬಾರೋ? ಆ ಸೈಕಲ್ ಹತ್ತಿಕೊಂಡು ಹೋಗು- ಬೇಗ!

ಮುದ್ದ—(ಮೆಲ್ಲನೆ) ಸ್ವಲ್ಪ ಹೊತ್ತು ಮುಂಚೆ ಆ ಸೀನನ ಕೂಡೆ ಪೇಟೆ ಸುತ್ತುತಿದ್ದರು.

ರಂಗ—ಬರ್‍ತಾ ಅಲ್ಲಿಯೂ ವಿಚಾರ್‍ಸಿಕೊಂಡು ಬಂದು ಬಿಡು. (ಸಿಟ್ಟಿನಿಂದ) ಅಂತೂ ಬೇಗ ಅವನ ಹೆಣಾನ ಈ ಕಡೆ ಎಳೆದುಕೊಂಡು ಬಾ! (ಮುದ್ದ ಹೋಗುವನು)

ರಂಗ—(ಅಡ್ಡಾಡುತಿರುವನು)

ಸಂ—(ಕಚ್ಚೆ ಹಾಕಿಕೊಳ್ಳುತ್ತ) ಆಚಾರ್‍ರೇ! ಗಂಟೆ ಹತ್ತು ಆಯಿತು. ಇನ್ನೇನುಮಾಡೋದು?

ರಂಗ(ಬೇಸರದಿಂದ) ಮಾಡೋದು ಸಾವು! ಆ ನಾರಾಯ ಇನ್ನೂ ಇಲ್ಲವಲ್ಲ! ಹೊಸನಾಟಕ ಒಳ್ಳೇ ರೀತೀಲಿ ಆಡಬೇಕೊಂದ್ರೆ-ಇಷ್ಟೆಲ್ಲಾ ಪಿಕಲಾಟ! ಹಾಗಾದರೆ ಒಂದಿಷ್ಟು ಬುದ್ಧಿ ಬೇಡವೆ? ಗಂಟೆ ಆಗಿಹೋಯಿತು- ಅದರಲ್ಲೂ ಮೊದಲಿನ ದೃಶ್ಯದಲ್ಲೇ ತನ್ನದು ಪ್ರವೇಶಾಂತ ಯೋಚನೆ ಬೇಡವೆ? (ಸುತ್ತಾಡುತ್ತಾ ಬೇಸರದಿಂದ) ಇಲ್ಲ- ಇಂತಹ ಅಕಲು ಕೆಟ್ಟ ಮನುಷ್ಯರನ್ನು ಕಟ್ಟಿಕೊಂಡರೆ ಕಂಪಿನಿಯ ಮರ್ಯಾದೆ ಉಳಿಯೋ ಹಾಗೇನೇ ಇಲ್ಲ! (ಹೊರಗಿನಿಂದ- ಚಪ್ಪಾಳೆ-ಸಿಳ್ಳುಗಳ ಗಲಭೆ ಕೇಳುವುದು)

ರಂಗ—ಆಯಿತಲ್ಲ ಮರ್ಯಾದೆ! ಇನ್ನೇನು ಬಾಕಿ? (ಒಬ್ಬ ಹುಡುಗನೊಡನೆ) ಮಾಣೀ- ಸೆಕೆಂಡ್ ಬೆಲ್ ಹೊಡೆದು ರಂಗದ ಮಂಗಳಾರತಿ ಮುಗಿಸಿಬಿಡು!-

(ಎರಡನೇ ಬೆಲ್ ಆಗುವುದು. ಮಾಣಿ-ಕಾಯಿಯೊಡೆದು

ಪಕ್ಕದಲ್ಲಿಯ ಕೃಷ್ಣ ಪಠಕ್ಕೆ ಸಮರ್ಪಿಸಿ- ಮಂಗಳಾರತಿ ಎತ್ತಿ ರಂಗಭೂಮಿಗೂ ತೋರಿಸುವನು)

ರಮಾ—(ತನ್ನ ಡ್ರೆಸ್ಸಿಂಗ್ ಮುಗಿಸಿ- ನಿಲುಗನ್ನಡಿಯ ಮುಂದೆ ನಿಂತು ನೋಡಿಕೊಳ್ಳುತ್ತ) ಟೈಮ್ ಎಷ್ಟಾಯಿತ್ರೀ ವರದರಾವ್?

ವರದ—(ನೆಕ್‌ಟೈ ಕಟ್ಟುತ್ತ) $10\frac{1}{4}$!

(ಚಪ್ಪಾಳೆ- ಸಿಳ್ಳು ಬಲವಾಗಿ ಕೇಳುವುದು)

ರಮಾ—ಆಚಾರ್‍ರೇ! ಇನ್ನೇನು ಮಾಡೋದು? ಜನರೆಲ್ಲಾ ಹುಚ್ಚುಕಟ್ಟಿ ಕೂಗುತ್ತಾ ಇದ್ದಾರಲ್ಲ!

ರಂಗ—(ಸಿಟ್ಟಿನಿಂದ) ಕತ್ತಿಗೆ ನೇಣು ತೆಗೆದುಕೊಳ್ಳೋದು! (ಸುತ್ತಾಡುವನು)

ಮಾದು—(ಮೆಲ್ಲನೆ) ಇನ್ನೂ ಬರ್‍ಲಿಲ್ಲ! ಏನಿದು ಹುಡು ಗಾಟ?

ರಂಗ—ಎಲ್ಲೋ ಚರಂಡಿಗೆ ಬಿದ್ದು ಸತ್ತೇ ಹೋದನೋ ಏನೋ! ಮತ್ತೆ ಹೇಗೆ ಬರೋದು? ಪಾಪ!

(ಸಭಿಕರ ಗಲಭೆ ಮತ್ತಷ್ಟು ಹೆಚ್ಚಾಗುವುದು)

ರಂಗ—ನೈ ಇನ್ನು ಸ್ಟೇಜಿಗೆ ಬೆಂಕಿಬೀಳೋದೊಂದೇ ಬಾಕಿ!

ವರದ—(ಕೋಟು ಹಾಕಿಕೊಳ್ಳುತ್ತ) ಸರಿ! ಗಂಟೆ ಹತ್ತು ವರೆ ಆಗಿಹೋಯಿತು.

(ಹೊರಗಡೆ ಸದ್ದಾಗುವುದು. ಎಲ್ಲರೂ ತಿರುಗಿ ನೋಡು ವರು. ಮುದ್ದ ಬರುವನು)

ರಂಗ—ಏನೋ?

ಮುದ್ದ—ಬಂದ್ರುಲ್ಲ.

ಕೃಷ್ಣ—(ಮತ್ತೇರಿದವನಂತೆ ವಾಲುತ್ತ ಬರುವನು)

ರಂಗ—(ಸಿಟ್ಟಿನಿಂದ) ಯಾವ ಚರಂಡಿಯೊಳಗೆ ಬಿದ್ದಿತ್ತೋ ಇವನ ಹೆಣ?

ಮುದ್ದ—ಇಲ್ಲ. ದಾರೀ ಮೇಲೆ ಬರ್‍ತಾ ಇದ್ರು!

ಸಂ—(ಮುದ್ದನೊಡನೆ ಮೆಲ್ಲನೆ) ಏನು ಮಾಡ್ತಿದ್ದ ಇಷ್ಟು ಹೊತ್ತು?

ಮುದ್ದ—(ಮೆಲ್ಲನೆ) ಆ ಸೀನನ ಮನೇಲಿ ಕುಡಿದು ಬಿದ್ದಿದ್ರು!

ವರದ—(ಆಶ್ಚರ್ಯದಿಂದ) ಹಾಂ! ಏನು?

ಸಂ—(ತಲೆದೂಗಿ) ಹಾಗಾದರೆ ಹೊಸ ನಾಟಕ ಆದ ಹಾಗೇನೇ!

ಕೃಷ್ಣ—(ಒಂದು ಕುರ್ಚಿಯಲ್ಲಿ ಒರಗಿ ಸುಮ್ಮನೆ ಕುಳಿತಿರುವ)

ರಂಗ—(ಏನು ಹೇಳಲೂ ತೋಚದೆ ಸಿಟ್ಟಿನಿಂದ ಅವನನ್ನೇ ದಿಟ್ಟಿಸುತ್ತ ನಿಂತಿರುವ)

ವರ—(ಹತ್ತಿರ ಸರಿದು) ಬಾರಯ್ಯ! ಸುಮ್ಮನಾದರೂ ತೊಂದರೆಕೊಡಬೇಡ. (ಕೈ ಹಿಡಿದು ರಂಗಿನಲ್ಲಿಗೆ ಕರೆದೊಯ್ಯುವನು)

ಕೃಷ್ಣ—(ಅಂಗಿ ಕಳಚಿ ಕುಳಿತುಕೊಂಡು ಒಂದು ಲೋಟಾ ತಣ್ಣೀರು ಕುಡಿಯುವನು)

(ಎಲ್ಲರೂ ಅವನ ಸಾಮಾನುಗಳನ್ನು ಸಿದ್ಧಗೊಳಿಸಿಕೊಡುವರು)

(ಹೊರಗಣಿಂದ ಮತ್ತಷ್ಟು ಗಲಭೆ. ಇಬ್ಬರು ಒಳಗಡೆ ಬರುವರು)

ಒಬ್ಬ—(ಸಿಟ್ಟಿನಿಂದ) ಏನಯ್ಯ! ನಿಮಗೆ ನಾಟಕ ಆಡೋ ಅಂದಾಜಿಯೇ ಇಲ್ಲವೆ? ಗಂಟೆ ಹನ್ನೊಂದು ಆಗಿ ಹೋಯಿತು!

ಮತ್ತೊಬ್ಬ—ಸಮಯ ಸಾರಿ ತಿಳಿದಿದ್ದವರಿಗೆ ನಿಮಗೆ ನಾಟಕವೇಕೆ ಮತ್ತೆ?

ರಂಗ—(ಕೈಮುಗಿದು) ಕ್ಷಮಿಸಬೇಕು ಸ್ವಾಮಿ! ಏನೋ ಸ್ವಲ್ಪ ತೊಂದರೆ ಆಗಿಹೋಯಿತು. ಈಗ ತೊಡಗುತ್ತದೆ.

ಒಬ್ಬ—ನಿಮ್ಮ ಗ್ರಹಚಾರದ ನಾಟಕ! ನಿಮ್ಮದೊಂದು ಪರ್ಕಟು ಕಂಪೆನಿ! (ಇಬ್ಬರೂ ತೆರಳುವರು)

ಕೃಷ್ಣ—(ಸ್ನೋ-ಪೌಡರನ್ನು ಹಾಕಿಕೊಂಡು- ದೋತ್ರ ಉಟ್ಟುಕೊಳ್ಳುವನು. ಎಲ್ಲವೂ ನಿರುತ್ಸಾಹದಿಂದ)

ರಂಗ—(ಉಸಿರು ಬಿಟ್ಟು) ಮುದ್ದ! ಥರ್ಡ್ ಬೆಲ್ಲು ಹೊಡೆದುಬಿಡು! ಎಲ್ಲಿ ಪ್ರಾರ್ಥನೆಯವರು?

ಮುದ್ದ—(ಒಂದು ಕಡೆ ಮಲಗಿದ್ದವರನ್ನು ಎಬ್ಬಿಸುವನು. ಇಬ್ಬರೂ ಆಕಳಿಸುತ್ತಾ ನಿಲ್ಲುವರು)

ರಂಗ—(ಅವರೊಡನೆ) ಡ್ರೆಸ್ ಸರಿಮಾಡಿಕೊಳ್ರೋ! ಮುದ್ದ! ಪರವೆಯೆಲ್ಲಾ ಸರಿಯಾಗಿ ಬಿಡು! (ಪರದೆ ಬೀಳುವುದು.)

---

## ದೃಶ್ಯ ೯

ಬೀದಿ—ಒಬ್ಬ ಮತ್ತೊಬ್ಬ- ಪ್ರವೇಶ-

ಒಬ್ಬ—(ಬೀಡಿ ಹೊತ್ತಿಸಿ-ಬೇಸರದಿಂದ) ಛೆ! ಎಂತಹ ಕಂಪಿನಿಯಪ್ಪ ಇದೊಂದು! ಗಂಟೆ ಹನ್ನೊಂದು ಆದರೂ ನಾಟಕವೇ ತೊಡಗಲಿಲ್ಲ.

ಮತ್ತೊ—ಹನ್ನೊಂದು? ಹನ್ನೊಂದು ಆಗಲೇ ಮಿಕ್ಕಿ ಹೋಗಿದೆ! (ಬೇಸರದಿಂದ) ಇವರ ಸಾವಿನ ನಾಟಕ! ನನಗಂತೂ ಚಪ್ಪಾಳೆ ತಟ್ಟಿ ತಟ್ಟಿ ಕೈಯೆಲ್ಲಾ ನೋವಾಗತೊಡಗಿತು!

ಒಬ್ಬ—ಹೌದು! ಹೊಲಸೆಲ್ಲಾದರು! ಬೇರೆ ಉದ್ಯೋಗ ವಿಲ್ಲದ ಕರ್ಮಕ್ಕೆ ಒಂದೊಂದು ಕಂಪಿನಿ ತೊಡಗೋದು!

ಮತ್ತೊ—(ಒಂದು ಚಿಟಿಕೆ ನಸ್ಯ ತೆಗೆದು) ಹೌದು! ಒಂದು ಒಳ್ಳೇ ದಿವಸ ನೋಡಿ ದಿವಾಳಿ ಅರ್ಜಿಯಾದರೂ ಹಾಕಬಹುದಲ್ಲ!

ಒಬ್ಬ—ಹಾಗಾದರೂ ಮಾಡಿದ್ದರೆ ಎಷ್ಟೋ ಉಪಕಾರ ವಾಗ್ತಿತ್ತು! ದುಡ್ಡುಕೊಟ್ಟೂ ರಾತ್ರಿಯಿಡೀ ನಿದ್ದೆಗೆಟ್ಟು ಕಾಯುವ ಈ ಪ್ರಾರಬ್ಧವಾದರೂ ಒಂದು ಉಳೀತಿತ್ತು!

ಮತ್ತೊ—(ನಸ್ಯ ಸೇದಿ) ಯಾರೋ ಒಬ್ಬ ಏಕ್ಟರ್ ಇನ್ನೂ ಬರ್‍ಲಿಲ್ಲವಂತೆ!

ಒಬ್ಬ—ಎಲ್ಲೋ ಸೂಳೇರ ಮನೇಲಿ ಬಿದ್ದಿರಬೇಕು. ಈ ನಾಟಕ ಕಂಪಿನಿಯವರ ಹಣೆಬರಹವೇ ಅಷ್ಟೆ! ರಂಗಭೂಮಿ ಉದ್ಧಾರ- ಉದ್ಧಾರಾಂತ, ಸಿಕ್ಕಿದ ಸೂಳೇರ ಮನೇ ಉದ್ಧಾರ ಮಾಡೋ ವ್ಯಾಪ್ತಿಯೊಂದು! ಯಾವುದಕ್ಕೂ ನಾಟಕ ತೊಡಗಲಿ- ಮತ್ತೆ ನೋಡು!

ಮತ್ತೊ—ಅದೇನು?

ಒಬ್ಬ—(ನಸುನಗುತ್ತ) ಇವರಿಗೆ ಕಲಿಸಲಿಕ್ಕೆ ನನ್ಗೆ ಗೊತ್ತಿಲ್ವೆ? ಇಲ್ಲಿ ನೋಡು-! (ಕಿಸೆ ತೋರಿಸುವನು)

ಮತ್ತೊ—(ಆಶ್ಚರ್ಯದಿಂದ) ಏನಿದು? ಒಂದು ರಾಶಿ ಕಲ್ಲು ತುಂಬಿಸಿಕೊಂಡಿದ್ದಿಯಲ್ಲ?

ಒಬ್ಬ—ಇಲ್ಲವಾದರೆ ಈ ಬಡ್ಡೀ ಮಕ್ಕಳಿಗೆ ಬುದ್ಧಿ

ಬರೋದೇ ಇಲ್ಲ. ನಾಲ್ಕು ಸಾರಿ ಚೆನ್ನಾಗಿ ತಿರುವಿ ಬಿಟ್ಟು ಬಿಡ್ತೊಂದ್ರೆ, ಮತ್ತೆಲ್ಲಾ ಸಮಯಸಾರಿ ಸ್ವತೇವ ನಿಗಾಕ್ಕೆ ಬರ್ತದೆ!

ಮತ್ತೊ—(ನಗುತ್ತ ತಲೆದೂಗಿ) ಅದೇನೋ ಹೌದು! ಒಳ್ಳೇ ಕ್ರಮ. (ಒಳಗಡೆ ಬೆಲ್ ಆಗುವುದು. ಉಸಿರು ಬಿಟ್ಟು) ಅಬ್ಬ ದೇವರೆ! ಅಂತೂ ತೊಡಗಿತೂಂತ ಆಯಿತು!

ಒಬ್ಬ—ಏನೋ ನಮ್ಮ ಪುಣ್ಯ! ಬಾ! ಇನ್ನು ಹೋಗೋಣ. (ಮುಂದೆ ನೋಡಿ) ಓಹೋ! ನಮ್ಮ ಚರ್ಮ್ಬರಿ ವಾಲ! ಈಗ ಒಂದಿಷ್ಟು ಕೊಂಡುಕೊಳ್ಳದಿದ್ದರೆ– ಮತ್ತೆ ಅಲ್ಲಿ ನಿದ್ದೆ ಮಾಡ್ತಿರಬೇಕಾದೀತು! (ಕೈತಟ್ಟುತ್ತ) ಏ ಚರ್ಮ್ಬರಿ– ಚರ್ಮ್ಬರೀ.... (ಇಬ್ಬರೂ ಆ ಕಡೆ ತೆರಳುವರು)

---

## ದೃಶ್ಯ ೧೦

—ಪ್ರಾರ್ಥನೆಯ ಪದವನ್ನು ಹಾಡಿ- ಕೈಮುಗಿದು ಇಬ್ಬರೂ ಒಂದೊಂದು ಕಡೆಯಿಂದ ಹೊರಟುಹೋಗುವರು.—

---

## ದೃಶ್ಯ ೧೧

ಉಪವನ:—ಮಾಧುರಿಯ ಪ್ರವೇಶ- ಮಗ್ಗುಲಲ್ಲಿ ಪ್ರೇಂಪ್ಟರನ ಕೈಯ ಪುಸ್ತಕ ತೋರುತ್ತಿರುವುದು.

ಮಾಧು—(ವಿರಹ ದುಃಖಿತಳಾದ ವಸಂತಿಕೆಯ ಭೂಮಿಕೆಯಲ್ಲಿ- ಹಾಡುತ್ತಾ ಬರುವಳು)

(— ಅಸಾವರಿ —)

ಸ್ಮರಶರ ಬಾಧೇ– ನಾತಾಳದಾದೇ-
ಕಾವುದು ಕರುಣಾಳೋ- - ॥ ಸ್ಮರ ॥
ಈತನು ತಾಪಾ– ಮೋಹವಿಲಾಪಾ=

ಮೀರಿಹುದೈ ಮೊಗ- ದೋಽರನೆ ಓಪಾ-
ಭೀಕರವಹುದೀ ಮಾರಪ್ರತಾಪಾ-
ಶ್ರೀಕರನೇ ಪೊರೆ-ಮೋಹನರೂಪಾ- || ಸ್ಮರ ||

ಅಯ್ಯೋ! ವಿಧಿಯೆ! ನನ್ನ ದುಃಖವನ್ನು ಕಂಡಷ್ಟೂ ನನ್ನ ಗೋಳನ್ನು ಕೇಳಿದಷ್ಟೂ ನಿನಗೆ ಹಿತವೆನಿಸುವುದೆ? ಹಾ! ಮನ್ಮಥನೆ! ನನ್ನನ್ನೇಕಿಂತು ಪೀಡಿಸುವೆ? ಕಾಂತನಿಲ್ಲದ ಕಾಂತಾಮಣಿಯನ್ನು ಇಂತು- (ಕಡೆಗಣ್ಣಿನಿಂದ ಪ್ರೋಂಪ್ಟರನನ್ನು ನೋಡುವಳು)

ಪ್ರೋಂ—ಇಂತು ಸಮಂತು ಚಿಂತೆಗೆ- - -

ಮಾದು—ಇಂತು ಸಮಂತು ಚಿಂತೆಗೆ ಗುರಿಮಾಡುವುದು ಯಾವ ಧರ್ಮ? ಬೇಡ ಬೇಡ! ನನ್ನನ್ನು ಕಾಡಬೇಡ! ಕೈಮುಗಿದು ಬೇಡುವೆನು (ಕೈಮುಗಿದು)

— ತಿಲಂಗ —

ಮುಗಿವೆನು ಕರವಿದನೂ—ನಾನೂ-||
ಸುಗಿದಪುದೀತನು- ಮಹಾನುಭಾವಾ- || ಮುಗಿ-||
ನಾರಿಯನೀಪರಿ- ಯಮಯಾತನೆಯುರಿ
ಗೇರಿಪುದೇಂತರ- ಪೊರೆವುದು ದೀನರ- || ಮುಗಿ ||

ಇಲ್ಲ! ನಿನಗೆ ಒಂದಿಷ್ಟೂ ಕರುಣೆಯಿಲ್ಲ! ನಿನ್ನನ್ನು ಯಾಚಿಸುವುದಕ್ಕಿಂತ ಈ ಜಡ ಪದಾರ್ಥಗಳನ್ನು ಬೇಡುವುದೇ ಎಷ್ಟೋ ಮೇಲು! (ಮೊಳಕಾಲೂರಿ)

ಎಲೈ ಲತೆಗಳಿರಾ! ಪುಷ್ಪಗಳಿರಾ! ನಿಮ್ಮ ಕೋಮಲ ಹೃದಯದಲ್ಲಿ ಇಷ್ಟು ಕಾಠಿಣ್ಯತೆ ಏಕೆ? ನಿಮ್ಮ ಸೊಬಗಿನಿಂದ ನನ್ನ ಮನಸ್ಸನ್ನು ಶಾಂತಗೊಳಿಸದೆ- ಮತ್ತು ಮತ್ತೂ ಉದ್ವಿಗ್ನಗೊಳಿಸುವುದೇಕೆ? (ಎದ್ದು ನಿಂತು) ಅಯ್ಯೋ! ಯಾರಿಗೆ

ಹಲುಬಿ ಏನು ಫಲ? ಅಯ್ಯೋ! ವಿರಹ ದುಃಖದಿಂದ ನನ್ನ ಹೃದಯುವು ದುರ್ಬಲವಾಗಿರುವುದು. ತಲೆ ತಿರುಗುತಿರುವುದು!

ಒಬ್ಬ—(ಕುಳಿಯಿಂದ) ಅಮೃತಾಂಜನ ಬೇಕೆ? (ಕೂಗಿ ಕೇಳುವನು)

ಮಾದು—ಕಣ್ಣು ಮಸಕಾಗುತಿರುವುದು! ಹಾಯ್! ಪ್ರಾಣನಾಥಾ—ಪ್ರಾಣನಾಥಾ- (ಮೂರ್ಛೆಗೊಳ್ಳುವಳು-)

ಪ್ರೊಂ—ಒಂದು ಪದ ಇದ್ದಿತ್ರೀ! 'ಮೋದವಾಂತು-'

ಮಾದು—(ಕುಳಿತುಕೊಂಡು ಹಾರ್ಮೋನಿಯಂ ಮಾಸ್ಟರ ಮುಖನೋಡುವಳು-ಅವ ತೊಡಗುವನು. ಕುಳಿತಿದ್ದಂತೆ)

(ಉಡುಪಿ ಕೃಷ್ಣಾ-)

ಮೋದವಾಂತು-ಬಾಳಲಿಂತೂ-
ಪ್ರಾಣಕಾಂತಾ- ಬಾರನೆಂತು।
ನೀರನೇಕೋ- ಬಾರನಕಟಾ-
ತೋರ್ಪುದೀ ಸಂಸಾರ ವಿಕಟಾ।
ಬಾರೊ ಬೇಗ- ಬೆರೆಯಲೀಗ-
ಪ್ರಾಣನಾಥಾ- ತಾಳೆನಾಹಾ ॥ ಮೋದ ॥

ಒಬ್ಬ—(ಪಾವಣೆ ಬಡಿದು ಸದ್ದುಮಾಡಿ) ವನ್ಸ್‌ಮೋರ್।

ಮಾದು—(ನೋಡಿ ಸಂಭ್ರಮದಿಂದ ಎದ್ದುನಿಂತು ಹೇಳುವಳು)

ಮತ್ತೊಬ್ಬ—ವನ್ಸ್‌ಮೋರ್!!

ಮಾದು—(ಲಕ್ಷ್ಯಮಾಡದೆ) ಯಾರದು? ಯಾರೋ-

ಮತ್ತೊಬ್ಬ—(ಮುಂದೆ ಸಾಗಲು ಬಿಡದೆ) ವನ್ಸ್‌ಮೋರ್-

ವರ್ಸ್ನಮೋರ್ (ಕುರ್ಚಿ ಬಡಿಯುತ್ತಾ ಗಲಭೆ ಮಾಡುವನು)

ಪ್ರೊಂ—ಹೇಳಿಬಿಡ್ರಿ! ಇಲ್ಲವಾದರೆ ಬಡ್ಡೀಮಕ್ಕಳು ಬಿಡೋ ಹಾಗಿಲ್ಲ.

ಮಾದು—(ಪುನಃ ಕುಳಿತು ಪದ ಹೇಳುವಳು - - )

ಒಬ್ಬ—ಹಾಗೀಗ! ಹೇಳ್ದಿದ್ರೆ ಯಾರು ಬಿಡ್ತಾರೆ ಮತ್ತೆ?

ಮಾದು—(ಎದ್ದು ನಿಂತು) ಯಾರದು? ಯಾರೋ ಈ ಕಡೆ ಬರುವಂತಿದೆಯಲ್ಲ! (ಸವಿತರ್ಕ) ನನ್ನ ಪ್ರಿಯನೇ ಇರಬಹುದೆ? (ನೋಡಿ ಸಂತೋಷದಿಂದ) ಹೌದು! ಇದೇನು ನಾನು ಸ್ವಪ್ನದಲ್ಲಿರುವೆನೇ ಎಚ್ಚತ್ತಿರುವೆನೆ? (ಕಣ್ಣುಗಳನ್ನು ಮುಟ್ಟಿ ನೋಡಿ–ಧೈರ್ಯದಿಂದ) ಎಚ್ಚತ್ತೆ ಇರುವೆನು! (ಕೈಮುಗಿದು) ದೇವನೆ! ನನ್ನ ಪ್ರಾರ್ಥನೆಯು ಕೊನೆಗಾದರೂ ನಿನಗೆ ಕೇಳಿಸಿತೆ? (ಎರಡು ಹೆಜ್ಜೆ ಮುಂದೆ ಸರಿದು) ಪ್ರಾಣನಾಥ-!

ಕೃಷ್ಣ—(ಮೋಹನನ ಭೂಮಿಕೆಯಲ್ಲಿ- ಅಮಲೇರಿ ವಾಲುತ್ತ ಬರುವನು)

ಕೃಷ್ಣ—(ಅಸ್ಪಷ್ಟವಾಗಿ) ಹಾಂ! ಬಂದೆ–ಬಂದೆ! ಸ್ವಲ್ಪ ತಾಳು!

ಮಾದು—(ಬೆದರಿ ಹಿಂದೆಸರಿಯುವಳು)

ಕೃಷ್ಣ—(ಮೊದಲಿನಂತೆ) ಪ್ರಾಣನಾಥಾ - ನಾಥಾಂತ ಬಾಯಿತುಂಬ ಬೊಗಳಿ ಈಗ ಮತ್ತೆ- - ! ಬಾ ಈ ಕಡೆ! (ಮುಂಬರಿದು ಕೈಹಿಡಿದು ಬಿಗಿದಪ್ಪುವನು)

ಮಾದು—(ಬೆದರಿ ಚೀರಿ– ಒಳಗೆ ಓಡುವಳು)

ಕೃಷ್ಣ—(ಅಲ್ಲೇ ಬಿದ್ದುಬಿಡುವನು)

—(ನಟರು, ಕುಳಿಯಿಂದ ಇಬ್ಬರು ಅಲ್ಲಿಗೆ ಓಡಿ ಬರುವರು)

ಒಬ್ಬ—ಏನಾಯಿತು? ಏನಾಯಿತು?

ಮತ್ತೊ—ವಾಸನೆ ಬರ್ತಾಯಿದೆ. ಚೆನ್ನಾಗಿ ಕುಡಿದಿದ್ದಾನಂತ ತೋರುತ್ತೆ!

ಒಬ್ಬ—ಈ ಪರ್ದೇನ ಮೇಲೆತ್ತಿಬಿಡಿ. ಇವನನ್ನ ಒಳಗೆ ಎತ್ತಿ ಇಡೋಣ!

ಮುದ್ದ—(ಪರದೆ ಮೇಲೆಳೆಯುವನು)

(ಸಂಜೀವ- ವರದ ಅವನನ್ನೆತ್ತಿ ಒಳಗೆ ಕೊಂಡುಹೋಗಿ ಚಾಪೆಯ ಮೇಲೆ ಮಲಗಿಸುವರು)

ರಂಗ—(ಗಾಬರಿಯಿಂದ ಏನೂ ತೋಚದೆ ಬೆಪ್ಪರಂತೆ ನಿಂತಿರುವನು)

ಒಬ್ಬ—ಏನಯ್ಯ! ನಿಮ್ಮ ನಾಟಕ ಮುಗೀತಲ್ವ?

ಮತ್ತೊ—ಮುಗೀದೆ ಮತ್ತೆ- ಇನ್ನೆಂತ ನಾಟಕ?

ಒಬ್ಬ—(ರಂಗನೊಡನೆ) ಹಾಗಾದರೆ ಅದಾದರೂ ತಿಳ್ಸಿಬಿಡಿರಪ್ಪ! ಜನರಾದರೂ ಮನೆಗೆ ಹೋಗಿ ಸ್ವಸ್ಥ ನಿದ್ದೆಮಾಡಲಿ- ಪಾಪ!

ಸಂ—(ತಲೆದೂಗಿ) ಅದು ಹೌದು. ತಿಳ್ಸಿಬಿಡೋದು ಒಳ್ಳೇದು ಆಚಾರ್ರೇ!

ರಂಗ—(ನಿಟ್ಟುಸಿರು ಬಿಟ್ಟು) ಆಗಲಿ. (ಮುಂದೆ ಬಂದು ಸಭಿಕರಿಗೆ ಕೈಮುಗಿದು) ಇಂದಿನ ನಮ್ಮ ನಾಟಕ ಇನ್ನು ಒಂದು ಅಂಕದ ಮೇಲೆ- -

ಒಬ್ಬ—(ಸಿಟ್ಟಿನಿಂದ) ಇನ್ನೆಲ್ಲಿಯದಯ್ಯ ಒಂದಂಕ? ಒಂದಂಕಾನೂ ಇಲ್ಲ- ಕೋಳಿಯಂಕಾನೂ ಇಲ್ಲ!

ರಂಗ—(ಎಚ್ಚತ್ತು) ಹಾಂ! ಹೌದು. ಇವತ್ತಿನ ನಾಟಕ ಮುಗೀತು. ಇನ್ನು ಇತೋಪ್ಯತಿಶಯವಾಗಿ- -

ಒಬ್ಬ—(ಬೇಸರದಿಂದ ತಡೆದು) ಅತಿಶಯವೋ-ಗಿತಿಶಯವೋ! ನೀವು ಸುಮ್ನಿರಿ ನೋಡೋಣ! ನಾನು ಹೇಳ್ತೇನೆ. (ಕೈಮುಗಿದು) ಮಾನ್ಯ ಅಧ್ಯಕ್ಷರೇ ಮತ್ತು ಸಭಿಕರೇ! ಇವತ್ತಿನ- (ಜ್ಞಾಪಿಸಿಕೊಳ್ಳುವವನಂತೆ ನಟಿಸಿ-ಮತ್ತೆ) ಎಂತದೋ ಒಂದು ನಾಟಕ ಏನೋ ಯೆಲ್ಲಾ ಆಗಿ ಮುಗಿದು ಹೋಯಿತು. ಆದ್ರಿಂದ ನೆರೆದ ಮಹಾ ಜನರುಗಳು ಬೇಜಾರು ಮಾಡ್ಬಾರದು-ಮುಖ್ಯ ದುಡ್ಡುವಾಪಾಸು ಕೇಳ್ಬಾರದೂಂತ ನಮ್ಮ ಈ ಬಟ್ರು ಭಾಷಣದಲ್ಲಿ ಹೇಳ್ತಾರಂತ ನಾನೀಗ ಹೇಳ್ತೇನೆ! ಆದ್ರಿಂದ ನನ್ನ ಈ ಚಿಕ್ಕ ಭಾಷಣದಲ್ಲಿರುವ ಯಾವತ್ತು ಗುಣದೋಷಗಳನ್ನು ಕ್ಷೀರಹಂಸ ನ್ಯಾಯದಂತೆ—

ಸಂ—ಅಲ್ರೀ! ಹಂಸಕ್ಷೀರ ನ್ಯಾಯಾಂತ.

ಒಬ್ಬ—(ಕಣ್ಣು ಕೆರಳಿಸಿ) ಎಲ್ಲಾ ನನಗ್ಗೊತ್ತು! ಸುಮ್ನಿರಿ! (ಪುನಃ ಸಭೆಯ ಮುಂದೆ) ಕ್ಷೀರಹಂಸನ್ಯಾಯದಂತೆ ಗ್ರಹಿಸಬೇಕೂಂತ ಬೇಡಿಕೊಳ್ಳುತ್ತೇನೆ. (ತಿರುಗಿ) ಅಲ್ವೆ ಬಟ್ರೇ?

ರಂಗ—(ತಲೆದೂಗುವನು)

ಒಬ್ಬ—ಎಲ್ಲಾ ಸರಿ. (ಕೈತಿರುಗಿಸುತ್ತಾ) ಮುಗೀತು. ಇನ್ನು ಹೋಗಬಹುದು. (ತಾನೆ ಚಪ್ಪಾಳೆ ತಟ್ಟುವನು)

—(ಅಂಕದ ಪರದೆ ಬೀಳುವುದು.)

---

# ಅಂಕ ೨

## ದೃಶ್ಯ ೧

—ಮನೆಯಲ್ಲಿ ರಂಗಾಚಾರಿ ಸಿಟ್ಟಿನಿಂದ- ಕೈಯನ್ನು ಬೆನ್ನ ಹಿಂದೆ ಕಟ್ಟಿಕೊಂಡು ಅತ್ತಿತ್ತ ತಿರುಗುತಿರುವನು- ಉಡುಪು:- ದೋತ್ರದ ಕಚ್ಚೆ- ಒಂದು ಶಾಲನ್ನು ಸೊಂಟಕ್ಕೆ ಸುತ್ತಿರುವನು—

ರಂಗ—(ಬೇಸರದ ದನಿಯಿಂದ) ಇಲ್ಲ, ಈ ಕಾಲದಲ್ಲಿ ಒಂದು ಸಂಸ್ಥೆಯನ್ನು ಸಸೂತ್ರವಾಗಿ ನಡಿಸುವಂತೇ ಯಿಲ್ಲ! ರಂಗಭೂಮಿ ಸುಧಾರಿಸಬೇಕು-ನಾಟ್ಯಕಲೆಉದ್ಧಾರ ಮಾಡ್ಬೇಕು ಎಂದು ಕೈಯಲ್ಲಿ ಕಾಸು ಇಲ್ಲದಿದ್ರೂ ಪೇಚಾಡುತ್ತ ಇದ್ರೆ— ಒಂದಲ್ಲ ಎರಡಲ್ಲ—ಹೆಜ್ಜೆ ಹೆಜ್ಜೆಗೂ ಅದಕ್ಕೆ ತೊಂದರೆ. ಅದ ರಲ್ಲೂ ಇಂತಹ ತಲೆತಿರುಕ ಏಕ್ಟರ್ಸನ್ನ ಕಟ್ಟಿಕೊಂಡರಂತೂ ಕೇಳೋದೇ ಬೇಡ! (ಎರಡು ತಡವೆ ಆಡ್ಡಾಡಿ ಸಿಟ್ಟಿನಿಂದ) ಆ ಕೃಷ್ಣಸಾಮಿ! ಲಫಂಗ-! ನಮ್ಮ ನಾಟಕ ಕೆಡಿಸೋದು ಇರಲಿ-ನಮ್ಮ ಕಂಪಿನಿಯ ಮರ್ಯಾದೆಯನ್ನೇ ತೆಗೆದುಬಿಟ್ಟ ನಲ್ಲ! ಪಾಪ! ಆ ನಮ್ಮ ಹುಡುಗಿಯನ್ನು ಅಷ್ಟು ದೊಡ್ಡ ಸಭೆ ಮುಂದೆ ಒತ್ತಿ ಹಿಡಿದು- ಮಾನ ತೆಗೆದುಬಿಟ್ಟನಲ್ಲ!

(ಪಶ್ಚಾತ್ತಾಪದಿಂದ) ನಾನು ಮಾಡಿದ್ದು ಮೋಸವಾ ಯಿತು. ಅವನನ್ನ ಹಾಗೇ ಬಿಟ್ಟುಬಿಟ್ಟದ್ದು ತಪ್ಪಾಯ್ತು! ಅವನ ಮೂಳೆ ಮುರಿಸಿಬಿಡಬೇಕಿತ್ತು-! ಮೂರ್ಖ!

(ಸಿಟ್ಟಿನಿಂದ) ಮುಠ್ಠಾಳ! ನಮ್ಮ ಕಂಪಿನೀನ ಬಿಟ್ಟು ಹೋಗ್ತಾನಂತೆ! ತಾನೊಬ್ಬ ಭಾರೀ ಏಕ್ಟರಂತ ತಿಳಿದುಕೊಂಡಿ ದ್ದಾನೆ. ನಟಭೈರವಂತೆ—ನಟಭೈರವ! ಇಂತಹ ಸಾವಿರಾರು ಭೈರವರನ್ನುಒಂದು ಕ್ಷಣದೊಳಗೆ ತಯಾರುಮಾಡಿಬಿಟ್ಟೇನು!

ತಾನು ಹೋದರೆ ನಮ್ಮ ಕಂಪಿನಿಯೇ ಮುಳುಗಿಹೋಗುತ್ತೇಂತ ಎಣಿಸಿದ್ದಾನೆ! ಇವ ಅಲ್ಲ- ಇವನ ಅಪ್ಪ ಹೊರಟುಹೋದರೂ ನಾನೇನು ಹೆದರುವ ಮಗನೆ? (ಹುರುಪಿನಿಂದ) ಒಂದು ಹೊತ್ತಿನೊಳಗೆ ಒಂದು ಹರಿಯೋ ಹುಳಕ್ಕೆ ವೇಟಕಟ್ಟಿಸಿ, ನಾಟಕ ಆಡ್ಸಿಬಿಟ್ಟೇನು! ಹರಿಯೋ ಹುಳಕ್ಕೆ- ತಿಳೀತೇ! (ಸುತ್ತಾಡಿ ದರ್ಪದಿಂದ) ಮುದ್ದ್ಯ! ಮುದ್ದ್ಯಾ!!

ಮುದ್ದ—(ಬಂದು ಕೈಮುಗಿದು) ಸ್ವಾಮಿ!

ರಂಗ—ಬಿಡಾರಕ್ಕೆ ಹೋಗಿ ಎಲ್ಲರ ಕೂಡೆ ಆ ಮೊನ್ನಿನ ನಾಟಕವನ್ನೇ ಚೆನ್ನಾಗಿ ಪ್ರಾಕ್ಟೀಸ್ ಮಾಡಿಕೊಳ್ಳಲಿಕ್ಕೆ ಹೇಳಿಬಿಡು. ಮತ್ತೆ ಆ ಭೈರವನ ಮೋಹನ ಪಾರ್ಟಿನ ಪುಸ್ತಕ ಸಂಜೀವನ ಕೈಯಲ್ಲಿದೆ- ಅದನ್ನು ನೀನು ತೆಗೆದುಕೊಂಡು ಬಾಯಿಪಾಠಮಾಡಿಬಿಡು!

ಮುದ್ದ—(ಆಶ್ಚರ್ಯದಿಂದ ನೋಡುತಿರುವನು)

ರಂಗ—ಏನು ನೋಡ್ತಾಯಿದ್ದಿ? ಆ ಪಾರ್ಟನ್ನು ನಿನ್ನ ಕೈಲಿ ಆಡ್ಸಿಬಿಡ್ತೇನೆ. (ಸಿಟ್ಟಿನ ಸೋಗಿನಿಂದ) ಆ ಹುಡುಗರಿಗೆಲ್ಲಾ ಪಿತ್ತ ಏರಿದೆ ನೆತ್ತಿಗೆ! ಅದನ್ನು ಇಳ್ಸಿಬಿಡ್ತೇನೆ- ನೋಡು! (ಎಚ್ಚರಿಸುವವನಂತೆ) ಮಾತ್ರ ಚೆನ್ನಾಗಿ ಬಾಯಿಪಾಟ ಮಾಡಿಕೋ ನೀನು!

ಮುದ್ದ—(ಕೃತಜ್ಞತೆಯ ನಗೆಯಿಂದ) ಆದೀತು ಸ್ವಾಮಿ! ನಾನು- - -

ರಂಗ—(ತಡೆದು) ನೀನೇನೂ ಹೆದರುವುದು ಬೇಡ. ಧೈರ್ಯ ತಾಳಿಕೊ! ಎಲ್ಲಾ ಚೆನ್ನಾಗುತ್ತೆ. ಹೋಗು.

ಮುದ್ದ—(ಹೆಮ್ಮೆಯಿಂದ ನಗುತ್ತಾ ಹೋಗುವನು)

ರಂಗ—(ಉಸಿರ್ಗರೆದು) ಉಸ್ಸಪ್ಪ! ಒಂದು ಕೆಲಸ ಮುಗಿ

ದಂತಾಯಿತು. (ಯೋಚಿಸುತ್ತ) ಮತ್ತೇನು? (ಜ್ಞಾಪಿಸಿ ಕೊಂಡು) ಆ ಹುಡುಗಿಯನ್ನು ಈ ಕಡೆಗೆ ಬರುವಂತೆ ಹೇಳಲು ಮರೆತುಬಿಟ್ಟೆ. ಪಾಪ! ಎಷ್ಟು ನೊಂದಿದ್ದಾಳೋ ಏನೋ! ಆಗಲಿ, ನಾನೇ ಹೋಗ್ತೇನೆ.

(ಒಳಗೆ ಹೋಗಿ ಅಂಗಿ ಹಾಕಿಕೊಂಡು ಬಂದು ಹೊರಟು ಹೋಗುವನು)

---

## ದೃಶ್ಯ ೨

—ಬೀದಿ. ರಂಗಾಚಾರಿ ಕನ್ನಡ ಪತ್ರಿಕೆಯೊಂದನ್ನು ಕೈಯಲ್ಲಿ ಹಿಡಿದುಕೊಂಡು ಓದುತ್ತಾ ಬರುವನು- ನಿತ್ಯದ ವೇಷ.—

ರಂಗ—ಅಲ್ಲ—! ಆ ಬಾತ್ಮಿದಾರ ಪುಣ್ಯಾತ್ಮ ನಮ್ಮ ಮೊನ್ನಿನ ನಾಟಕದ ವಿಚಾರ- ತಲೆಗೆ ಬಂದ ಹಾಗೆ ಬರೆದು ಬಿಟ್ಟಿದ್ದಾನಲ್ಲ! ಅರ್ಥ ಅನುಭವ ಇಲ್ಲದ ಮಾತಂತೆ- ಮಾತು ಮಾತಿಗೂ ಪದವಂತೆ- ಕೊನೆಗೆ ನಾಟಕವೇ ಒಂದು ನಾಟಕ ವಾಗಿ ನಿಂತುಹೋಯಿತಂತೆ! ಏನು ಹಾಗಾದರೆ? ಹೀಗೂ ಬರಿ ಯೋದೇ? ಅವನಿಗೆ-ಪಾಪ! ಪಾಸ್ ಕೊಡಲಿಲ್ಲಾಂತ ಹೊಟ್ಟೆ ಯುರಿ! ಅಷ್ಟೆ! ಕಂಪಿನಿಯವರ ಕಷ್ಟ ಅವನಿಗೇನು ಗೊತ್ತು? ಏನು ಮಾಡೋದು? ಅವನಿಗೂ ಹೆದರೋ ಕಾಲ ಬಂತೀಗ!

(ಹೆಜ್ಜೆ ಮುಂದಿಟ್ಟು ನೋಡಿ) ಓಹೋ! ಇಲ್ಲೇ ಬಂತ್ತಾ ಯಿದೆಯಲ್ಲ ಸವಾರಿ!

ಬಾತ್ಮೀದಾರ—(ಮುಂಡು- ಶರ್ಟು. ಕೈಯಲ್ಲೊಂದು ಪೇಪರ್- ಕೆಲವು ಲಕೋಟೆಗಳು-)

ಬಾತ್ಮಿ—(ಕಂಡರೂ ಕಾಣದವನಂತೆ ನಟಿಸಿ ಮುಂದೆರಳು ವನು.)

ರಂಗ—ಏನು ಸ್ವಾಮಿ? ನಮಸ್ಕಾರ!

ಬಾತ್ಮಿ—(ನಿರ್ಲಕ್ಷ್ಯವಾಗಿ) ನಮಸ್ಕಾರ. (ಮುಂದೆ ಹೋಗುತ್ತಿರುವನು.)

ರಂಗ—ಸ್ವಾಮಿ. ಒಂದು ಕ್ಷಣ ಮಾತಾಡೋ ಕೆಲ್ಸ ಇದೆ.

ಬಾತ್ಮಿ—ಇಲ್ಲ. ಈಗ ಸಮಯವಿಲ್ಲ. ನಾಳೆ ನೋಡೋಣ.

ರಂಗ—ಹಾಗಾದರೆ ಸ್ವಲ್ಪ ನಿಲ್ಲಿ! ಇದೊಂದು ಪಾಸ್ ಕೊಟ್ಟುಬಿಡ್ತೇನೆ.

ಬಾತ್ಮಿ—(ನಿಂತು) ಏನಂದ್ರಿ?

ರಂಗ—(ಕಿಸೆಗೆ ಕೈಹಾಕುತ್ತ) ಮತ್ತೇನಿಲ್ಲ. ಒಂದು ಪಾಸು! (ತೆಗೆದು ಕೊಡುವನು.)

ರಂಗ—(ತೆಗೆದುಕೊಳ್ಳುತ್ತ ಸಂತೋಷದಿಂದ) ನಾಟಕದ್ದೆ? ಆಗಲಿ. ಹೇಗಿದೆ ನಿಮ್ಮ ಕಂಪಿನಿ? ಮೊನ್ನೆ ಏನೋ ಒಂದು ನಾಟಕ ಸ್ವಲ್ಪ ಕೆಟ್ಟು ಹೋಯ್ತಂತಲ್ಲ?

ರಂಗ—(ಪೇಪರ್ ಎತ್ತಿ ತೋರಿಸಿ) ಆ ವಿಚಾರವೆಲ್ಲಾ ತಮಗೆ ಗೊತ್ತು. ಪೇಪರಿನಲ್ಲಿ ಹಾಕ್ಸಿದ್ದೀರಲ್ಲ!

ಬಾತ್ಮಿ—(ನಾಚುಗೆಯಿಂದ) ಅಹುದು ನೋಡಿ! ಹಾಗಾಗ ಬಾರದಿತ್ತು. ನಮಗೆಂದರೆ (ಎಂಜಲು ನುಂಗಿ) ನಮಗೆಂದರೆ ನೋಡಿ! ಹಾಕದೆ ನಿರ್ವಾಹವಿಲ್ಲ. ಏನು ಮಾಡೋದು ಹೇಳಿ!

ರಂಗ—ಇನ್ನು ಮಾಡೋದೇನು?

ಬಾತ್ಮಿ—ಹಾಗಲ್ಲ. ಆ ವಿಚಾರದಲ್ಲಿ ತಮಗೆ ಬೇಸರಬೇಡ. ಇನ್ನೊಂದು ತಡವೆ ಬರೆದು ಬಿಡ್ತೇನೆ. ಅದಕ್ಕೇನಾಗಬೇಕು?

ರಂಗ—ಅದಷ್ಟೆ. ಅದೆಲ್ಲಾ ನಿಮ್ಮ ಕೈಯೊಳಗೆ ತಾನೆ!

ಬಾತ್ಮಿ—(ಹೆಮ್ಮೆಯಿಂದ) ಮತ್ತೇನು? ಇನ್ನೊಂದು ತಡವೆ ನೋಡಿ! ನಿಮ್ಮ ಬ್ಲೋಕೊಂದು ಮಾಡ್ಸಿ ಕೊಟ್ಟುಬಿಡಿ. ಮತ್ತೆಲ್ಲಾ ನಾನು ಸುಧಾರಿಸಿ ಬಿಡ್ತೇನೆ.

ರಂಗ—(ಕೈಮುಗಿದು) ಅಂತೂ ಕೃಪೆಯಿರಲಿ. ನಾವೇನೊ ನಮ್ಮ ಹೊಟ್ಟೆಪಾಡಿಗಾಗಿ...

ಬಾತ್ಮಿ—(ತಡೆದು) ಹಾಗಲ್ಲ. ನಾಟಕಾಂದ್ರೆ ನೋಡಿ! It is an Art! ಒಂದು ಕಲೆ. ಆದರ ಉದ್ಧಾರಕ್ಕೆ ನೀವಿಷ್ಟು ಹೆಣಗಾಡುವಾಗ, ಆ ಉಪಕಾರ ಮರೆಯಲಿಕ್ಕೆ ಸಾಧ್ಯವೇ ಯಿಲ್ಲ ನೋಡಿ!

ರಂಗ—(ಹೆಮ್ಮೆಯಿಂದ ನಗುವನು.)

(ವಿನಯದಿಂದ) ಅಂತೂ ದಯೆಯಿರಲಿ!

ಬಾತ್ಮಿ—ಸರಿಸರಿ. ಅಷ್ಟೇನೂ ಹೇಳಬೇಕಾಗಿಲ್ಲ. (ಹೊರಡುವನು.)

ರಂಗ—(ತಡೆದು)ಬನ್ನಿ, ಈ ಕಡೆ ಬನ್ನಿ. ಸ್ವಲ್ಪ 'ಶಾಂತಿ ಭವನ'ಕ್ಕೆ ಹೋಗಿ ಬರೋಣ. (ಹೋಗುವನು.)

ಬಾತ್ಮಿ—(ನಗುತ್ತ) ನಮ್ಮ ಜಾತಿಯವರ ಕೂಡೆ ದ್ವೇಷ ಕಟ್ಟಿಕೊಂಡರೆ ಸಾಧ್ಯವಿದೆಯೆ? ಆದರಲ್ಲೂ ನಾಟಕ ಕಂಪಿನಿಯವರ ಜೊಟ್ಟು ನಮ್ಮ ಕೈಯೊಳಗೇನೇ–ಎಂದ ಮೇಲೆ ನಮ್ಮೊಳಗೆ ಒಂದು ಒಪ್ಪಂದ ನಡೆದೇ ತೀರಬೇಕು.

(ಹೋಗುವನು.)

---

## ದೃಶ್ಯ ೩

—ರಂಗಾಚಾರಿಯ ಮನೆ. ಗೋದಾವರಿ ಪಾತ್ರವೊಂದರಲ್ಲಿ ಅಕ್ಕಿಯನ್ನಿರಿಸಿಕೊಂಡು ಕುಳಿತು ಕಸ ಹೆಕ್ಕುತಿರುವಳು—

ಗೋದು—ಇಲ್ಲ. ಈ ಗಂಡಸರನ್ನು ನಂಬಲಿಕ್ಕೇ ಬರುವಂತಿಲ್ಲ. ತಮ್ಮ ಕೆಲಸವಾಗುವ ತನಕ ಹೇಗೂ ಮಾತಾಡ್ತಾರೆ. ಮತ್ತೆ-ಮಾತಾಡೋದು ಪೂರಾ ಇಂಗ್ಲೀಷೆ! ಅವರ ಮಾತು ಕೇಳಿ ಇದ್ದ ಚಿನ್ನ ಎಲ್ಲಾ ಕಳೆದುಕೊಂಡು ಈಗ ದಿನನಿತ್ಯ ಬೆಕ್ಕಿನ ಹಾಗೆ ಕಾದಾಡುವ ಕಾಲ ಬಂತಲ್ಲ! ಕೇಳಿದರೆ—ಎಲ್ಲಾ ರೂಪಾಯಿ ಬೇಂಕಿನಲ್ಲಿ ಕೂಡಿಟ್ಟಿದ್ದೇನೆ. ಚಿನ್ನಕ್ಕೆ ಕ್ರಯ ಕಡಿಮೆಯಾದ ಕೂಡಲೆ ಕೊಂಡುಕೊಳ್ಳೋಣ-ಅಂತ ಹಾರ್ಸಿಬಿಡ್ತಾರೆ! ಎಲ್ಲಿಯ ರೂಪಾಯೋ-ಯಾವ ಬೇಂಕೋ-ದೇವರಿಗೇ ಗೊತ್ತು! ಮುದ್ದನ ಹತ್ತಿರ ಕೇಳಹೋದರೆ ಕೆಲಸದವರಿಗೆ ಸಂಬಳವೇ ಬಾಕೀಂತ ಹೇಳ್ತಾನಪ್ಪ! ಇದೇನವಸ್ಥೆಯೋ! ನನಗಂತೂ ಅರ್ಥವೇ ಆಗೋದಿಲ್ಲ.

ಇಷ್ಟು ಹೊತ್ತಾದರೂ ಬೆಳಿಗ್ಗೆ ಹೋದವರ ಸವಾರಿ ಇನ್ನೂ ಇಲ್ಲ! ಪ್ರಾಕ್ಟೀಸಂತೆ-ಪ್ರಾಕ್ಟೀಸ್! ಇನ್ನು ಮನೆಗೆ ಬಂದ ಕೂಡಲೆ ಅವಳೊಬ್ಬಳು-ಮಾಧುರಿಯೋ-ಮಾರಿಯೋ-ಏನೋ-ಅಂತೂ ಅವಳದ್ದೇ ಸುದ್ದಿ-ವರ್ಣನೆ! ಕೆಲಸದವರಿಗೆಲ್ಲಾ ಸಂಬಳ ಸರಿಯಾಗಿ ಸಲ್ಲದಿದ್ದರೂ ಅವಳ ಮೈಮೇಲೆ ಈಗಾಗಲೇ ಹೊಸ ಹೊಸ ಚಿನ್ನಗಳೇನು—ಬಣ್ಣಬಣ್ಣದ ಸೀರೆಗಳೇನು! ಎಲ್ಲಾ ಹೊಳೀತಾ ಯಿದ್ದಾವೆ! (ಅಸೂಯೆಯಿಂದ) ಆ ಚೈನೊಂದು ಮೊನ್ನೆ ಈಚೆ ಮಾಡಿಸಿದಂತೆ ಕಾಣ್ತದೆ. ಅಂತೂ ನನಗೇಕೋ ಬಾರಿ ಸಂಶಯ ತೋರುತ್ತದಪ್ಪ!

(ಯೋಚಿಸಿ) ಏನೇ ಆಗಲಿ! ಇನ್ನು ಸುಮ್ಮನೆ ಬೇಡ್ತಾ ಬಂದರೆ ಆಗಲಿಕ್ಕಿಲ್ಲ. ಎಷ್ಟು ಜಗಳವಾದರೂ ಚಿಂತೆಯಿಲ್ಲ. ಈ ಹೊತ್ತು ನನ್ನ ಚಿನ್ನಯೆಲ್ಲಾ ಕೇಳಿಯೇ ಬಿಡಬೇಕು.

(ಹಟದಿಂದ) ಇವರ ನಾಟಕ! ನಾಟಕಕ್ಕೆ ಬೆಂಕಿ ಹಾಕಿದ್ರು! ನನಗೇನು ಬಂತು ಅದರಿಂದ?

ರಂಗ—(ಸಂತೋಷದಿಂದ ಪೇಪರ್ ನೋಡುತ್ತಾ ಬರುವನು.) ಏ, ನೋಡೇ! ಈ ಪೇಪರ್--

ಗೋದು –(ಸಿಟ್ಟಿನಿಂದ) ನಿಮ್ಮ ಪೇಪರಿಗೆ ಬೆಂಕಿ ಹಾಕಿ!

ರಂಗ—(ಗಾಬರಿಯಿಂದ) ಅಯ್ಯೋ! ಇದೇನು ಬಂತು ಹೊಸ ರೋಗ!

ಗೋದು—(ಮೊದಲಿನಂತೆಯೇ) ಬಂದದ್ದು ಗ್ರಹಚಾರ! ನನ್ನ ಚಿನ್ನವೆಲ್ಲಾ ಒಳ್ಳೇ ಮಾತಿನಿಂದ ಹಿಂದೆ ಮಾಡ್ಸಿ ಕೊಡ್ತೀರೋ ಇಲ್ಲವೋ–ಹೇಳಿಬಿಡಿ!

ರಂಗ—ಯಾರು ಮಾಡ್ಸಿಕೋಡೋದಿಲ್ಲ ಅಂದ್ರು?

ಗೋದು—ಮಾಡ್ಸಿ ಕೊಡೋದು ನನಗಲ್ಲ. ಆ ಮಾಧುರಿ- ಆ ಮಾರೀಗೆ!

ರಂಗ—(ಆಶಂಕೆಯಿಂದ) ಯಾರು ಹೇಳಿದ್ದು? ಅದೆಲ್ಲಾ ಸುಳ್ಳು. ನೀನು ನಂಬಬೇಡ!

ಗೋದು—ಸುಳ್ಳು? ನಿಮ್ಮ ಬುದ್ಧಿವಂತಿಕೆ ನನಗೆ ಗೊತ್ತಿಲ್ವೆ? ನಾಟಕ ನಾಟಕಾಂತ ನೀವು ಉದ್ಧಾರ ಮಾಡೋದು ಇಷ್ಟೆ!

ರಂಗ—(ಸ್ವಲ್ಪ ದರ್ಪದಿಂದ) ಉದ್ಧಾರ? ನೋಡಿಲ್ಲಿ! ರಂಗಭೂಮಿಯ ಉದ್ಧಾರಕ್ಕೆ ನಾನು ಅವತಾರ ಮಾಡಿದ್ದೀಂತ ಬರೆದಿದ್ದಾನೆ ಪೇಪರಿನವ! ನನ್ನ ಕೀರ್ತಿ ನಿನಗೇನು ಗೊತ್ತು?

ಗೋದು—ಆ ಕೀರ್ತಿಯೆಲ್ಲಾ ಗೊತ್ತಾಗ್ತಾಯಿದೆ. ಆದ

ಕ್ಕೇನೂ ಇನ್ನು ಹೆಚ್ಚು ಉದ್ದ ಇಲ್ಲ. (ಹಟದಿಂದ) ಈಗ ನನ್ನ ಚಿನ್ನ ಮಾತ್ರ ಕೊಟ್ಟುಬಿಡಿ!

ರಂಗ—(ಬೇಸರದಿಂದ) ಮತ್ತೂ, ಚಿನ್ನ ಚಿನ್ನ! ಆ ಮಾತು ಬಿಡು!

ಗೋದು—(ಸಿಟ್ಟಿನಿಂದ ಸರಿಯಾಗಿ ಕುಳಿತು) ಬಿಡೂಂದ್ರಿ?

ರಂಗ—ಹಾಗಲ್ವೆ! ನಾನು ಮಾಡುವ ನಾಟ್ಯಕಲೆಯ ಉದ್ಧಾರ–ರಂಗಭೂಮಿಯ ಸೇವೆ- ಆ ಕೀರ್ತಿ (ಹುರುಪಿನಿಂದ) ಸ್ವಲ್ಪ ಕಣ್ಣು ಬಿಟ್ಟು ನೋಡು ಈ ಪೇಪರ್! (ಅವಳ ಬಳಿ ಹಾಕುವನು.)

ಗೋದು—(ಮುದ್ದೆಮಾಡಿ ದೂರಕ್ಕೆ ಬಿಸುಟು) ಕಣ್ಣು ಬಿಡೋದು ಇನ್ನೇನಿದೆ ಬೇರೆ? ನಿಮಗೆ ಬೇಕಾದವರಿಗೆ ಕೊಡಲಿಕ್ಕೆ-ಚಿನ್ನ ಮಾಡಿಸಲಿಕ್ಕೆ- ಬಗೆಬಗೆ ಬಣ್ಣದ ಸೀರೆ ಕೊಂಡುಕೊಳ್ಳೋಕೆ-

ರಂಗ—(ಗಾಬರಿಯಿಂದ) ಇನ್ನು ಇಲ್ಲಿ ನಿಂತರೆ ಜಯಿಸುವಂತೆಯೇ ಇಲ್ಲ. (ಹೋಗುವನು)

ಗೋದು—(ಅಬ್ಬರಿಸುತ್ತಾ) ಹೋಗಿ- ಹೋಗಿ! ಬರದೆ ಎಲ್ಲಿಗೆ ಹೋಗ್ತೀರಿ ನೋಡ್ತೇನೆ!

(ಪಾತ್ರ ಹಿಡಿದುಕೊಂಡು ಒಳಗೆ ಹೋಗುವಳು.)

---

## ದೃಶ್ಯ ೪

—ಬೀದಿ. ರಂಗಾಚಾರಿಯ ಪ್ರವೇಶ—

ರಂಗ—(ದರ್ಪದಿಂದ) 'ಬರದೆ ಎಲ್ಲಿಗೆ ಹೋಗ್ತೀರಿ?

ನೋಡ್ತೀನೆ!'- ನೋಡುವುದೇನಿದೆ? ಬದನೇ ಕಾಯಿ! ಚಿನ್ನ ವಂತೆ-ಚಿನ್ನ! ಅವಳು ಚಿನ್ನ ಕೊಡದಿದ್ದರೆ ಏನು ಮಾಡ್ತಾಳಂತೆ? ನಾನು ಗಂಡುಸು! ಚಿನ್ನವಲ್ಲ-ಅವಳನ್ನೇ ಮಾರಲಿಕ್ಕೂ ನನಗೆ ಅಧಿಕಾರವಿದೆ. 'ನಸ್ತ್ರೀ ಸ್ವಾತಂತ್ರ್ಯಮರ್ಹತಿ'- ನನಗೇನು ಶಾಸ್ತ್ರ ಗೊತ್ತಿಲ್ಲವೆ? ಆ ಜಗತ್ಪಂಡಿತ ಸೀನಾಚಾರ್ರ ಮಗ ನಾನು! ನನಗೆಲ್ಲಾ ಗೊತ್ತು! ಮತ್ತೆ ಮಾತಾಡ್ತಾಳೆ ಅವಳು!

ನಾನೇನೋ- ಸಾಯಲಿ- 'ಹೆಂಗುಸಿನ ಕೂಡೆ ಜಗಳ ಬೇಡಾಂತ ಸುಮ್ಮನಿದ್ದರೆ—ಅವಳ ಕಾನೂನು ಮತ್ತೆ! (ನಿರ್ಧಾರದ ಸೋಗಿನಿಂದ) ಇನ್ನೊಂದು ಸಾರಿ ಖಂಡಿತ ಹೇಳಿಯೇ ಬಿಡ್ತೀನೆ- ಚಿನ್ನ ಕೊಡೋದಿಲ್ಲ. ಏನು ಮಾಡ್ತಿ? ನಾನು ಮಾಡ್ಸಿದ ಚಿನ್ನ ನಾನು ತೆಗ್ದೆ. ನಿನಗೇನು ಬಂತು ಕಷ್ಟ? ನಾನು ಗಂಡ—ನೀನು ಹೆಂಡತಿ. ಹೇಳಿದ ಹಾಗೆ ಕೇಳುತ್ತಿರ ಬೇಕು! ಬಿದ್ದಿರು ಅಲ್ಲಿ! ನಾಯಿ!-ಅಂತ ಒದ್ದೇಬಿಡ್ತೀನೆ! (ಕಾಲೆತ್ತಿದಾಗ)

ಸಾಹುಕಾರ—(ಸುಮಾರು 45 ವರ್ಷದವ-ಬಿಗಿದ ಕಚ್ಚೆ-ಹಳೆಯ ರೀತಿಯ ಕೋಟೊಂದು- ಕೈಯಲ್ಲಿ ಬೀಗದ ಕೈಯ ಗೊಂಚಲು)

ಏನಯ್ಯ? ಆಚಾರ್ರೇ!

ರಂಗ—(ದಂಗುಬಡಿದು ನಿಲ್ಲುವನು)

ಸಾಹು—(ಸಿಟ್ಟನಿಂದ) ಅಂಗಡಿ ಹಣ ಕೊಡೋದಿರೋದು ಬೇರೆ!- ಮತ್ತೆ ದಾರೀಲಿ ಬಂದಾಗ ಮಾತಾಡಿಸದೆ ಕಾಲೆತ್ತೋದು ಬೇರೆ! ಅಲ್ಲವೆ?

ರಂಗ—(ಕೈ ಮುಗಿದು) ಇಲ್ಲ ಸ್ವಾಮಿ. ಏನೋ ಬೇರೆ ವಿಷಯ ಯೋಚಿಸುತ್ತಾ ಇದ್ದೆ. ಹಣ ಎಲ್ಲಾ ಕೊಡೋಣ.

ಒಂದೇ ಗಂಟೇಲಿ ಬಡ್ಡಿ ಕೂಡಿಸಿ ಕೊಡೋಣ! ನಿಮಗೇನು ಗರ್ಜಿ?

ಸಾಹು—(ಕಣ್ಣು ಕೆರಳಿಸಿ) ನಿಮ್ಮ ಗಂಟುಗಿಂಟು ಒಂದೂ ಬೇಡ. ಹಣ ಮಾತ್ರ ಈಗ ಸಿಕ್ಕಲೇಬೇಕು!

ರಂಗ—(ಬೇಸರದಿಂದ, ಸ್ವಗತ) ಈ ಹೊತ್ತು ಬೆಳಿಗ್ಗೆ ಯಾರ ಮುಖ ನೋಡಿದ್ದೆನೋ! (ಹಿಂದಿರುಗಿ ನೋಡಿ) ಸರಿ! ಈ ಮಾರಾಯನೂ ಬಂದೇಬಿಟ್ಟ! ಒಂದೇ ಪಕ್ಕದಲ್ಲಿತ್ತು ರೋಗ! ಈಗಂತೂ ಎರಡು ಬದಿಗೂ ಬಂದಂತಾಯಿತು! ಡಬ್ಬಲ್ ನಿಮೋನಿಯ! ಇದರಿಂದ ಇನ್ನು ಪಾರಾಗುವಂತೆಯೇ ಇಲ್ಲ!

ಹೋಟೆಲಿನವ—(ಸುಮಾರು 30 ವರ್ಷ ವಯಸ್ಸು. ಡೊಳ್ಳು ಹೊಟ್ಟೆ-ಸೈಕಲ್ ಕಚ್ಚೆ. ಸಿಲ್ಕಿನ ಶರ್ಟು. ಪಟ್ಟೆ ಹಿಡಿದ ಜರಿ ಶಾಲು. ಕೈ ಬೆರಳುಗಳಲ್ಲಿ ನಾಲ್ಕು ಉಂಗುರ. ರಿಸ್ಟ್‌ವಾಚು ಬೇರೆ.)

ಆಚಾರ್ರೇ! ಸಾಹುಕಾರ್ರ ಲೆಕ್ಕ ಚುಕ್ತಾ ಆಗುವಾಗ ನಮ್ಮದೂ ಸ್ವಲ್ಪ ನೆನಪಿರಲಿ!

ರಂಗ—(ಕುಗ್ಗು ಸ್ವರದಿಂದ) ಚುಕ್ತಾ ಆಗುವಾಗ....

ಹೋಟೆಲಿನವ—ಆ ಅಂದಾಜಿಯೇ ಇಲ್ಲಾಂತ ತೋರುತ್ತೆ? ಅಲ್ಲವೆ?

ಸಾಹು—(ದರ್ಪದಿಂದ) ಇಲ್ಲಾಂದ್ರೆ ಬಿಡುವವರು ಬೇಕಲ್ಲ! (ರಂಗಾಚಾರಿಯೊಡನೆ) ಏನು? ಹಣಕ್ಕೇನು ಏಲ ವಾರಿ?

ಹೋಟೆಲ್—ನಮ್ಮದೂ ಅದೇ ಪ್ರಶ್ನೆ. ಡಿಟೋ! ನಿಮ್ಮ ಖಾತೇದು ಕಡಲೆಕ್ಕ 60ಕ್ಕೆ ಮಿಕ್ಕಿದೆ!

ರಂಗ—(ಗಾಬರಿಯಿಂದ) ಏನು?

ಹೊಟೇಲ್—ಏನೂಂದ್ರೆ-ತಿನ್ನುವಾಗ ನಿಮಗೆಲ್ಲಾ ಹೊಟ್ಟೆ ಸಾಕಾಗೋದಿಲ್ಲ. ಆ ಬಾತ್ಮಿದಾರನಂತೂ ನಿಮ್ಮ ಲೆಕ್ಕಾಂತ ದಿನಕ್ಕೆ 50 ಸಾರಿ ಬಂದು, ಹೊಟ್ಟೆ ಒಡೆದು ಹೋದರೂ ಚಿಂತಿಲ್ಲಾಂತ ಹಟ ಹಿಡಿದು ಮುಕ್ಕುತಿರುತ್ತಾನೆ. ಪುಣ್ಯಾತ್ಮ! ಮತ್ತೆ ಲೆಕ್ಕಾಚಾರ ಬೆಳೀದೇ ಇರ್ತದೆಯೆ?

ರಂಗ—(ಇಬ್ಬರಿಗೂ ಕೈ ಮುಗಿದು) ಸ್ವಾಮಿ! ಹೇಗಾದರೂ ಮಾಡಿ ಸದ್ಯದಲ್ಲೇ ನಿಮ್ಮ ಲೆಕ್ಕ ಚುಕ್ತಾ ಮಾಡ್ತೇನೆ.

ಸಾಹು—ನೋಡಿ ಸ್ವಾಮಿ. ಹೇಳಿದೇಂತ ಬೇಜಾರು ಮಾಡಬೇಡಿ! ನಿಮ್ಮಂತ ನಾಟಕ ಕಂಪಿನಿಯವರನ್ನು ನಂಬಲಿಕ್ಕೇ ಬರೋದಿಲ್ಲ.

ಹೋಟೆಲ್—(ತಲೆದೂಗಿ) ಅದು ಹೌದು! ಈ ತನಕ ಯಾವ ನಾಟಕದ ಜನರೂ ಊರು ಬಿಟ್ಟು ಹೋಗ್ತಾ ತಮ್ಮ ಲೆಕ್ಕಾಚಾರ ಪೂರೈಸಿದ್ದೇ ಇಲ್ಲ. ಟೋಕರ್ ಹಾಕೋದೇ ನಿಮ್ಮವರ ಜಾತಿ ಸ್ವಭಾವ!

ರಂಗ—(ವಿನಯದಿಂದ) ಏನು ಬೇಕಾದರೂ ಹೇಳಿ. ಕೇಳ್ತೇನೆ. ಅಂತೂ ಕ್ಷಮಿಸಬೇಕು. ನಾಟ್ಯಕಲೆಯ ಉದ್ಧಾರ ಮಾಡ್ಬೇಕೂಂತ ನಾವೇನೋ ಯಥಾನುಶಕ್ತಿ ರಂಗಭೂಮಿಯ ಸೇವೆ ಮಾಡ್ತಿದ್ದೇವೆ. ಅದಕ್ಕೆ ನೀವು....

ಸಾಹು—(ಬೇಸರದಿಂದ ತಡೆದು) ನಿಮ್ಮ ಆ ದೊಡ್ಡದೊಡ್ಡ ಶಬ್ದಗಳೆಲ್ಲಾ ಪ್ರಕೃತ ಬೇಡ. ಆ ಉದ್ಧಾರ-ಸೇವೆಯೆಲ್ಲಾ ನಿಮಗೇ ಇರಲಿ!

ಹೋಟೆಲ್—ನಮ್ಮ ಹಣ ಮಾತ್ರ ನಮಗೆ ಬರಲಿ-!

ರಂಗ—(ಸ್ವಲ್ಪ ಹೊತ್ತು ಸುಮ್ಮನಿದ್ದು) ಈ ಹೊತ್ತು

ರಾತ್ರಿ ನಮ್ಮದು ಹೊಸ ನಾಟಕ. ಅದರ ಕಲೆಕ್ಷನ್ ಪೂರಾ ನೀವೇ ವಹಿಸಿಕೊಂಡು ಬಿಡಿ. ಆಗದೆ?

(ಇಬ್ಬರೂ ಮುಖ ಮುಖ ನೋಡಿಕೊಳ್ಳುವರು.)

ಹೋಟೆಲ್—ಹಾಗಾದರೂ ಆಗಲಿ ಸಾಹುಕಾರ್ರೇ! ಸಿಕ್ಕಿದಷ್ಟು ಮಕ್ಕಳ ಪುಣ್ಯಾಂತ ಗಾದೆಯಿದೆಯಲ್ಲ!

ಸಾಹು—ಹುಂ! ಆಗಲಿ. ಟಿಕೇಟ್ ರೂಮಿಗೆ ಮಾತ್ರ ಸಂಜೆ ನಮ್ಮದೇ ಜನ ಕಳ್ಸಿಕೊಡ್ತೇವೆ

ರಂಗ—(ತಲೆದೂಗುವನು.)

(ಸಾಹುಕಾರ, ಹೋಟೆಲ್ ಕೀಪರ್ ತೆರಳುವರು.)

ರಂಗ—(ಚಿಂತೆಯಿಂದ ಮೆಲ್ಲನೆ) ಈ ಹೊತ್ತು ನನಗೇನೋ ಶನಿದೆಶೆ ಆರಂಭಾಂತ ತೋರುತ್ತೆ! ಹು! ಆಗಲಿ.

(ಖಿನ್ನನಾಗಿ ಹೋಗುವನು.)

---

## ದೃಶ್ಯ ೫.

**—ನಾಟಕದವರ ಬಿಡಾರ. ಸಾಮಾನುಗಳೆಲ್ಲಾ ಚೆಲ್ಲಿಕೊಂಡಿರುವುವು. ಸಂಜೀವರಾಯ-ಒರಗಿ ಕುಳಿತು ಕಾದಂಬರಿಯೊಂದನ್ನು ಓದುತಿರುವನು. ರಮಾನಾಥ-ನಾಟಕ ಒಂದರ ಪಾರ್ಟು ಬರೆದುಕೊಳ್ಳುತಿರುವನು. ವರದರಾಯ-ಬೀಡಿ ಸೇದುತ್ತ ಮಲಗಿರುವನು. ಮುದ್ದ-(ಈಗ ಸೇವಕನಲ್ಲ)ಒಂದು ಟ್ರಂಕಿನ ಬಾಗಲು ತೆರೆದು ವಸ್ತ್ರಗಳನ್ನೆಲ್ಲಾ ಸರಿಯಾಗಿ ಇಡುತಿರುವನು. ಉಡುಪು:—ಎಲ್ಲರದೂ ಸಾಮಾನ್ಯತರವಾದುದು—**

ರಮಾ—(ಪೆನ್ ಕೆಳಗಿಟ್ಟು ನಗುತ್ತ) ಅಲ್ಲ! ನಮ್ಮ ಮುದ್ದನಿಗೊಂದು ನಸೀಬು ಬಂದದ್ದು ಸಾಕಿನ್ನು!

ವರದ—(ಮಲಗಿದ್ದಂತೆಯೇ) ಏನೋ! ಮುದ್ದಂತ ಕರೀತಿ?

ಮುದ್ದಣ್ಣಾಂತ ಹೇಳೋಕೆ ಬರೋದಿಲ್ವೆ? ಅಥವಾ ಮುದ್ದಣ್ಣ ರಾಯಂತಾದರೂ ಹೇಳೋದು ಬೇಡ್ವೆ?

ಸಂ—(ಪುಸ್ತಕವನ್ನು ಒತ್ತಟ್ಟಿಗಿರಿಸಿ) ನೋಡೋಣ! ನನ ಗೊಂದು ಬೀಡಿ ಕೊಡು!

ವರದ—(ಕೊಡುವನು.)

ಸಂ—(ತೆಗೆದುಕೊಂಡು ಬೆಂಕಿಕಡ್ಡಿ ಹೊತ್ತಿಸುತ್ತ) ಅವನಿ ಗೇನೋ ಬುಧದೆಶೆ ಪ್ರಾರಂಭ! ಕೃಷ್ಣಸಾಮಿ ಹೋಗೋದಕ್ಕೂ ಆ ದೆಶೆ ಆರಂಭಿಸಿದ್ದಕ್ಕೂ ಸರಿ ಹೋಗಿಬಿಟ್ಟಿತು.

ರಮಾ—ಏನಯ್ಯಾ-ಮುದ್ದ! ಮಾತಾಡೋದಿಲ್ಲ!

ಮುದ್ದ—(ಸಿಟ್ಟಿನಿಂದ ನೋಡುತ್ತಾ) ಏನೋ! ಮುದ್ದ-ಮುದ್ದಾಂತ ಕರೀತಾಯಿದ್ದಿ? ಹಾಗೆ ಹೇಳೋಕೆ ನೀನೇನು ನನ್ನ ಅಜ್ಜನೆ?

ರಮಾ—(ಆಶ್ಚರ್ಯದಿಂದ) ಆಂ! ಬಂತಲ್ಲ ಈಗಲೇ ಕೋಡು!

ಮುದ್ದ—ಕೋಡು ಬಾರದೆಯೇನು? ನಿನ್ನ ಹೆದರಿಕೆಯೆ?

ರಮಾ—(ನಗುತ್ತ) ಇನ್ನೂ ಬಣ್ಣ ಹಾಕಿಕೊಳ್ಳಲಿಕ್ಕೆ ತೊಡಗಿ ನಾಲ್ಕು ದಿನವೂ ಆಗಲಿಲ್ಲ. ಮತ್ತೀಗ ಇಷ್ಟರಲ್ಲೇ!

ಮುದ್ದ—(ಸಿಟ್ಟಿನಿಂದೆದ್ದು) ಏನು ಬಾಯಿಗೆ ಬಂದ ಹಾಗೆ ಬೊಗಳುತ್ತಾ ಇದ್ದಿ?

ರಮಾ—(ಸಿಟ್ಟಿನ ಸೋಗಿನಿಂದ) ಬೊಗಳೋದೆಂದರೆ? ಬೊಗಳಲಿಕ್ಕೆ ನಾನೇನು ನಾಯಿಯೆ?

ಮುದ್ದ—ಆದ್ರಿಂದಲೇ ನನ್ನ ಗೊಡವೀಗೆ ಬಂದಿ!

ರಮಾ—(ಹಟದಿಂದ) ನಾನು ಬಾಯಿಗೆ ಬಂದ ಹಾಗೆ ಹೇಳ್ತೀನೆ! ನಿನಗೇನು?

ಮುದ್ದ—(ಸಿಟ್ಟಿನಿಂದ ಹತ್ತಿರ ಬಂದು) ಹಾಗಾದರೆ ನಾನೂ ಕೈಗೆ ಬಂದ ಹಾಗೆ ತೋರಿಸಿಯೇನು!

ವರದ—(ಮಲಗಿದ್ದವ ಕುಳಿತು) ಛೀ! ಏನಿದಪ್ಪಾ ನಿಮ್ಮದು ಜಗಳ? ಸುಮ್ಮನಿರಿ ನೋಡೋಣ!

ಮುದ್ದ—(ಆಕ್ಷೇಪವಾಗಿ) ಅದು ಹೇಗೆ ಬರ್ತದೆ ಸುಮ್ಮನಿರೋಕೆ?

ರಂಗಾಚಾರಿ—(ಪ್ರವೇಶಿಸಿ) ಏನಿದು ಗಲಭೆ?

ಮುದ್ದ—(ಅವರ ಬಳಿ ಸರಿದು) ಆಚಾರ್ರೇ! ಇದನ್ನೀಗ ನೀವೇ ನಿರ್ಣಯ ಮಾಡಿ ಕೊಡಬೇಕು. ಇಲ್ಲವಾದರೆ ನಾನಿಲ್ಲಿ ಇರೋದಿಲ್ಲ!

ರಂಗ— (ಆಶ್ಚರ್ಯದಿಂದ) ಏನಿದು ವಿಚಾರ?

ರಮಾ—ನಾನು ಮುದ್ದಾಂತ ಕರೆದುದಕ್ಕೆ ಇದಿಷ್ಟು ಕೋಪ!

ರಂಗ—ಛೀ! ಅದೇನು ಭಾರಿ? ಏನೋ ತಮಾಷೆಗೆ ಹೇಳಿದ. ಸುಮ್ಮನಿರೋ!

ಮುದ್ದ—ತಮಾಷೆ! ತಮಾಷೆಗೇನೀಗ ಇಲ್ಲಿ? ಬಾಯಿಗೆ ಬಂದ ಹಾಗೆ ಹೇಳೋದು! ನಾನೇನಿಲ್ಲಿ ಬಿಟ್ಟಿ ಆಳೆ? (ನಿರ್ಧಾರವಾಗಿ) ಇದು ಖಂಡಿತ ಆಚಾರ್ರೇ! ಇವ ಇದ್ದ ಕಂಪಿನೀಲಿ ನಾನಿರೋ ಹಾಗಿಲ್ಲ. ನಿಶ್ಚಯ.

ರಂಗ—(ಗಂಭೀರ ಭಾವದಿಂದ) ಏನಿದು ಹುಡುಗಾಟ ಮುದ್ದಣ್ಣ? ನಮ್ಮದು ಈ ರಾತ್ರಿ ನಾಟಕ-ನೀನೀಗ ಹೀಗೆ ಹೇಳ್ತಾಯಿದ್ದಿಯಲ್ಲ? ಇದಕ್ಕೆ ಅರ್ಥಯೇನು ಹಾಗಾದರೆ?

ಮುದ್ದ—ನಾಟಕವಾದರೆ ನನಗೇನು? ನನ್ನ ಮರ್ಯಾದೆ

ನನಗೆ ದೊಡ್ಡದು! ಅವನನ್ನ ಹೊರಡಿಸದಿದ್ರೆ ನಾನೇ ಹೊರಟೆ! (ತನ್ನ ಟ್ರಂಕಿನ ಹತ್ತರ ಹೋಗಿ ಬೀಗ ಹಾಕತೊಡಗುವನು.)

ರಂಗ—(ಸಮಾಧಾನವಾಗಿ) ಬೇಡಪ್ಪ ಮುದ್ದಣ್ಣ! ಹೀಗೆ ಮಾಡ್ಬೇಡ. ರಾತ್ರಿ ನಾಟಕ ಇದೆ. ನನ್ನ ಮರ್ಯಾದೆ ತೆಗಿಬೇಡ!

ಮುದ್ದ—(ಟ್ರಂಕ್ ಹಿಡಿದುಕೊಂಡು) ಆಚಾರ್ರೇ! ನಿಮಗೆ ಮರ್ಯಾದೆಯಿದ್ದ ಹಾಗೆ ನನಗೂ ಇದೆ! ತಿಳೀತೆ? (ಹೊರಟು ಹೋಗುವನು.)

ರಂಗ—(ಚಿಂತೆಯಿಂದ-ನಿಟ್ಟುಸಿರುಬಿಟ್ಟು) ಇಲ್ಲ. ಇನ್ನು ಮುಂದೆ ಏಕ್ಟರ್ಸನ್ನೆಲ್ಲಾ ಕೂಡಿಸೋ ಹಾಗೇನೇ ಇಲ್ಲ! ಮುಖಕ್ಕೆ ಒಂದು ತಡವೆ ಬಣ್ಣ ಬಿದ್ದ ಕೂಡಲೇ—ನಾಲ್ಕು ಅಡಿ ಭೂಮಿಯಿಂದ ಮೇಲೇರಿ ಬಿಡ್ತಾರೆ! ಮತ್ತೆ ತಾವು ಯಾರೂಂತ ಅವರಿಗೇ ತಿಳಿದಿರೋದಿಲ್ಲ! (ಉಸಿರ್ಗರೆದು) ಹುಂ! ಆಳಾಗಿದ್ದವನನ್ನು ಮೇಲೆತ್ತಿ ರಂಗಭೂಮಿ ಮೇಲೆ ತಂದರೂ—ಕೊನೆಗೆ ಅವಸ್ಥೆ ಇಷ್ಟೆ! ಆಯಿತು! ಇಂದಿನ ಹೊಸ ನಾಟಕ ಬಹಳ ಸಂಭ್ರಮದಿಂದ ಕೊನೆಯಾಯಿತು!

ವರದ—ಸ್ವಲ್ಪ ನೀನು ಹೋಗಿ ಅವನಿಗೆ ಬುದ್ಧಿ ಹೇಳಪ್ಪ! ನನಗೇಕೋ ತಲೆಸಿಡೀತದೆ. ಮೈಯಲ್ಲಿ ಸ್ವಲ್ಪ ಸ್ವಲ್ಪ ಜ್ವರ ಇದೆ! ಅದೇನು ಗ್ರಹಚಾರ ಹಿಡೀತೋ ತಿಳಿಯೋದಿಲ್ಲ.

(ವರದ ಹೋಗುವನು).

ರಂಗ—(ನಿಟ್ಟುಸಿರು ಬಿಟ್ಟು) ಕುರ್ಚಿಯಲ್ಲಿ ತಲೆಯನ್ನು ಹಿಂದಕ್ಕೆ ಜೋಲು ಬಿಟ್ಟು, ಬೇಸರದಿಂದ ಕುಳಿತು ಬಿಡುವನು)

---

## ದೃಶ್ಯ ೬.

—ಉಪವನ—ಮಾಧುರಿ—ಕೃಷ್ಣಸ್ವಾಮಿ ಇವರ ಪ್ರವೇಶ. ಕೃಷ್ಣ ಸ್ವಾಮಿ—ಫುಲ್ ಸೂಟಿನಲ್ಲಿರುವನು. ಕೈಯಲ್ಲೊಂದು ದಪ್ಪವಾದ ಇಂಗ್ಲೀಷ್ ಪುಸ್ತಕ—

ಮಾದು—(ವೈಯ್ಯಾರದಿಂದ) ನಿಮ್ಮ ಊರು ಯಾವುದೊಂದ್ರೆ?

ಕೃಷ್ಣ—ನಮ್ಮದು ಮೈಸೂರ ಕಡೆ. ನಮ್ಮ ತಂದೆಯವರು ಅಲ್ಲಿ ಲಾಯರಿ ನೋಡ್ತಾಯಿದ್ದಾರೆ.

ಮಾದು—(ಆಶ್ಚರ್ಯದಿಂದ) ಲಾಯರಿಯೇ! ಮತ್ತೇಕೆ ನೀವು ನಾಟಕಕ್ಕೆ ಸೇರಿ ಬಿಟ್ರಿ?

ಕೃಷ್ಣ—ಅದೇನೋ ರಂಗಭೂಮಿಯ ಸುಧಾರಣೆ ಮಾಡ್ಬೇಕೂಂತ ಹುಚ್ಚು ತಗಲಿಬಿಟ್ಟಿತು. B. A. ಪ್ಯಾಸಾದ ಕೂಡಲೇ—

ಮಾಧು—(ಆಶ್ಚರ್ಯದಿಂದ) ಏನು? B. A. ಪ್ಯಾಸೇ?

ಕೃಷ್ಣ—(ಹೆಮ್ಮೆಯಿಂದ ಮುಗುಳ್ನಗುತ್ತ) ಹೌದು. ನಮ್ಮ ಸ್ಟೇಟಿನೊಳಗೆ ಇಂಗ್ಲೀಷಿನಲ್ಲಿ 'ಹೈಯಸ್ಟ್' ಬಂದಿದ್ದೆ. ಕೊನೆಗೆ ಅರಮನೆ ಕಂಪಿನೀಗೆ ಸೇರಿಬಿಟ್ಟೆ.

ಮಾದು—ಹೌದೇ?

ಕೃಷ್ಣ—ಅಲ್ಲಿ ನಟ ಭೈರವಾಂತ ಟೈಟಲ್—

ಮಾದು—(ಕುತೂಹಲದಿಂದ) ಅಂದ್ರೆ ಏನದು?

ಕೃಷ್ಣ—ಭೈರವಾಂತ ಅದೊಂದು ಸೋಶಿಯಲ್ ಡ್ರಾಮಾದ 'ಕೆರಕ್ಟರ್.' ನನ್ನ ಆ ಆಕ್ಟು ನೋಡಿ ಮೆಚ್ಚಿ ಅರಮನೆಯವರು ಹಾಗೇ ಟೈಟಲ್ ದಯಪಾಲಿಸಿ ಬಿಟ್ಟರು.

ಮಾದು—ತಲಬೂ ಚೆನ್ನಾಗಿದ್ದಿರಬೇಕು?

ಕೃಷ್ಣ—ಹೌದು. (ನಸು ನಗುತ್ತ) ಮಂತ್ಲೀ ಸ್ಯಾಲ್ರೀ ಫಯ್ಯು (95) ಸಿಗುತಿತ್ತು.

ಮಾದು—(ಆಶ್ಚರ್ಯದಿಂದ) ಮತ್ತೇಕೆ ಬಿಟ್ಟು ಬಂದು ಬಿಟ್ಟಿರಿ?

ಕೃಷ್ಣ—(ತಿರಸ್ಕಾರ ಭಾವದಿಂದ) ಏನೋ ಒಂದು ಸಣ್ಣ ಮಾತಿಗಾಗಿ ರೇಗಿ ಹೊರಟು ಬಂದು ಬಿಟ್ಟೆ.

ಮಾದು—ಇನ್ನು ಮತ್ತೆ?

ಕೃಷ್ಣ—(ಅಲಕ್ಷ್ಯವಾಗಿ) ನಮಗೇನ್ರೀ? ಪುನಃ ಅಲ್ಲಿಂದ್ಲೇ ಲೆಟರ್ ಬಂದದೆ. ನೂರು ರೂಪಾಯಿ ತಲಬು ಮಾಡ್ತೀವಿ. ಬರಬೇಕೂಂತ!

ಮಾದು—(ಮುಖ ನೋಡುತ್ತ ಮುಗುಳ್ನಗೆಯಿಂದ) ಹಾಗಾದರೆ ಆ ಕಡೆಗೇನೇ ಹೋಗ್ತೀರಿ ನೀವು! ಅಲ್ಲವೆ?

ಕೃಷ್ಣ—ಹೌದು. ಆದರೆ—ಪೈಕಿ ಒಂದು ಒಳ್ಳೇ ಏಕ್ಟ್ರೆಸ್ ಪರಿಚಯವಿದ್ದರೆ ತಮಗೆ ತಿಳಿಸಬೇಕೂಂತ ಅವರ ಕಾಗದದಲ್ಲಿದೆ. ಆ ಬಗ್ಗೆ ಯೋಚಿಸುತ್ತಾ ಇದ್ದೇನೆ. ನಮಗೆ ನೋಡಿ! ಹಾಗೆಲ್ಲಾ ಹೆಣ್ಣು ಮಕ್ಕಳ ಸಂಬಂಧ—ಪರಿಚಯವೆಲ್ಲಾ ಬಹಳೇ ಕಡಿಮೆ!

ಮಾದು—(ವೈಯ್ಯಾರದಿಂದ ನೋಡುತ್ತ) ಕೊನೆಗೆ ಏನು ಮಾಡಿದಿರಿ?

ಕೃಷ್ಣ—ಏನೂ ಇಲ್ಲ. ಈಗ ನಿಮ್ಮನ್ನ ನೋಡಿ ಒಡನೆ ಜ್ಞಾಪಕವಾಯಿತು. ಆದರೆ ನಿಮ್ಮಂತವರನ್ನು ಕೇಳೋದು ಹೇಗಂತ ಇದ್ದೆ.

ಮಾದು—(ಕೊರಳು ಕೊಂಕಿಸಿ) ಅದೇನೋ!

ಕೃಷ್ಣ—ಹಾಗಾದರೆ—ಬರ್ತೀರೇನು?

ಮಾದು—(ಯೋಚಿಸುತ್ತ) ಹುಂ! ಆಗಬಹುದು (ಲಜ್ಜೆಯಿಂದ ಸೆರಗು ತುದಿಯನ್ನು ಕಚ್ಚುತ್ತ) ಪರಿಚಯದವರು ಹೇಗೂ ನೀವಿದ್ದೀರಲ್ಲ! ಮತ್ತೇನು ಭಯ?

ಕೃಷ್ಣ—(ನಸು ನಗುತ್ತ ಕೈಹಿಡಿದು) ಹಾಗಾದರೆ ಚೆನ್ನಾಯಿತು. (ಕೊರಳಿಗೆ ಕೈಹಾಕಿ) ಈ ಸರ ಬಹಳೇ ಹೊಸತಾಗಿ ಕಾಣಿಸುವುದಲ್ಲ? ಇತ್ತೀಚೆಗೆ ಮಾಡಿಸಿದ್ದಿರಬೇಕು.

ಮಾದು—(ಲಜ್ಜೆಯಿಂದ) ಹೌದು. ಮೊನ್ನೆ ತಾನೇ ಮಾಡ್ಸಿದ್ದು. (ನಸು ನಗುವಳು.)

ಕೃಷ್ಣ—(ಅರ್ಥವರಿತು ನಸು ನಗುವನು.)

ನಿಮ್ಮ ತಲಬು ಎಲ್ಲಾ ಕೈಹತ್ತಿರುವುದಷ್ಟೆ?

ಮಾದು—(ನಗುತ್ತಾ) ಅದಕ್ಕಿಂತಲೂ ಸ್ವಲ್ಪ ಹೆಚ್ಚಾಗಿ!

ಕೃಷ್ಣ—ಹಾಗಾದರೆ ನಾವು ನಾಳೆ ಮುಂಜಾನೆ ಹೊರಟು ಹೋಗೋಣ. ನೀವು ನಿಮ್ಮ ಸಾಮಾನುಗಳನ್ನೆಲ್ಲಾ ಸಾಗಿಸಿಕೊಂಡು ರಾತ್ರಿ ನಮ್ಮಲ್ಲಿಗೆ (ತಡೆದು) ಬೇಡ. ನಾನೇ ನಿಮ್ಮಲ್ಲಿಗೆ ಬಂದು ಬಿಡ್ತೀನಿ!

ಮಾದು—ಅದೇ ಒಳ್ಳೆತು.(ಮುಂದೆ ಹೋಗುತ್ತಾ ನೋಡಿ) ಯಾರದು? ನಮ್ಮ ಆಚಾರ್ರೊ?

ಕೃಷ್ಣ—(ನೋಡಿ) ಹೌದಾಗಿರಬೇಕು.

ಮಾದು—(ಆಶಂಕೆಯಿಂದ) ನಾವು ಹಾಗಾದರೆ ಈ ಕಡೆ-

ಕೃಷ್ಣ—(ತಡೆದು) ಏಕೆ? ಅವನದೇನು ಹಂಗು ನಮಗಿನ್ನು? (ಕೈಹಿಡಿದು) ಒಂದಲ್ಲ-ಎರಡಲ್ಲ-ಹತ್ತು ತಡವೆ ಅವನ ಕಣ್ಣು ಮುಂದೆಯೇ ಸುಳಿದಾಡೋಣ! ಅದಕ್ಕೇನು? ಅಲ್ಲವೆ? (ಮುಖ ನೋಡಿ ನಸುನಗುವನು).

ಮಾದು—(ಮುಗುಳ್ನಗುವಳು.)

ಕೃಷ್ಣ-(ಕೈಗಳನ್ನು ಅದುಮಿ)O! my sweet heart! (ಮುತ್ತಿಡುವನು)

(ನಗುತ್ತ, ಹೆಗಲ ಮೇಲೆ ಕೈಯಿರಿಸಿಕೊಂಡು ಮುನ್ನಡೆವರು.)

---

## ದೃಶ್ಯ ೭

—ರಂಗಾಚಾರಿಯ ಮನೆ ಉಣ್ಣೆಯಶಾಲೊಂದನ್ನು ಅರ್ಧಕ್ಕೆ ಮಾತ್ರ ಹೊದೆದುಕೊಂಡು ರಂಗಾಚಾರಿಯು ಹಾಸುಗೆಯಮೇಲೆ ಮಲಗಿರುವನು—

ರಂಗ—(ಕುಳಿತು-ಕ್ಷೀಣ ಸ್ವರದಿಂದ)

ಗೋದೂ-! ಗೋದೂ-!!

(ಉತ್ತರವಿಲ್ಲ.)

ರಂಗ—(ಉಸಿರ್ಗರೆದು-ದೈನ್ಯದಿಂದ)

ಅಯ್ಯೋ! ನನ್ನ ಅವಸ್ಥೆ ಕೊನೆಗೆ ಹೀಗೂ ಆಗಬೇಕೆ? ಈ ಹಾಳು ಸಂಸಾರದ ತಗಣೇ ಕಾಟ ತಪ್ಪಿಸಿಕೊಳ್ಳೋಣಾಂತ ಎಣಿಸಿ, ಇದ್ದ ಚಿನ್ನಾಭರಣಗಳನ್ನೆಲ್ಲಾ ಮಾರಿ ಏನೋ ಒಂದು ವ್ಯಾಪ್ತಿಯನ್ನು ತಲೆಗೆ ಸುತ್ತಿಕೊಂಡರೆ-ಅದರ ಅವಸ್ಥೆಯೂ ಹೀಗಾಗಬೇಕೆ? ಅಯ್ಯೋ! ಒಂದು ಕಡೆಯಲ್ಲಿ ಹೆಂಡತಿಯ ಕಾಟ-ಇನ್ನೊಂದ್ಕುಕಡೆ ಸಾಲಗಾರರ ಕಾಟ-ಮತ್ತೊಂದು ಕಡೆ ತಲೆತಿರುಕ ನಟರ ಕಾಟ-ಈ ಕಾಟಗಳೆಲ್ಲಾ ಒಂದಾಗಿ ನನ್ನ ಮಾಂಸ ಮಾಂಸಗಳನ್ನು ಹರಿದು ತಿನ್ನತೊಡಗಿರುವವಲ್ಲ! ಈ ಕಾಟಗಳ ಗೋಳನ್ನೆಲ್ಲಾ ಮರೆತುಬಿಟ್ಟು ಒಂದು ಕ್ಷಣ ಕಾಲ ವಾದರೂ ನೆಮ್ಮದಿಯಿಂದ ಹಾಯಾಗಿ ಕುಳಿತಿರುವೆನೆಂದರೆ— ಈ ರೋಗದ ತಾಳಲಾರದ ವೇದನೆಯೊಂದು ಬೇರೆ ನನ್ನ ಪ್ರಾಣ ವನ್ನೇ ಹಿಂಡುತ್ತಿರುವುದು! (ಪಶ್ಚಾತ್ತಾಪದಿಂದ) ನನಗೇಕೆ

ಬೇಕಿತ್ತು ಈ ನಾಟಕದ ಹವ್ಯಾಸ! (ಒತ್ತಿ) ಆ ಹಾಳ ಸೂಳೆಯ ಸಹವಾಸ! (ವೇದನೆಯನ್ನನುಭವಿಸಿ) ಅಯ್ಯೋ! ಬಾಯಾರಿಕೆಯೇ! ಗೋದೂ! ಗೋದೂ!!

ಗೋದು—(ಸಿಡುಕಿನಿಂದ ಬಂದು) ನಿಮಗೇನಾಗಿದೆ ಕೂಗಲಿಕ್ಕೆ? ಊರೇ ಒಂದಾಗುವ ಹಾಗೆ ಅರಚಿಕೊಳ್ತಾಯಿದ್ದೀರಲ್ಲ!

ರಂಗ—(ದೈನ್ಯದಿಂದ)ಸ್ವಲ್ಪ ಬಿಸಿ ನೀರಾದರೂ ಕೊಡು! ಸುಮ್ಮಗಾದರೂ ಕಾಡಬೇಡ!

ಗೋದು—ನಾನ್ಯಾಕೆ ಕಾಡ್ತೇನೆ ನಿಮ್ಮನ್ನ? ಈಗೆಲ್ಲಿ ಹೋದಳು ನಿಮಗೆ ನೀರು ಕೊಡುವವಳು? ಮಾದೂ–ನನ್ನ ಮಾದೂಂತ ಅಂದು ಕುಣಿದಾಡ್ತಾ ಇದ್ದಿರಲ್ಲ? ಈಗ ಮತ್ತೆ ನಾನೇಕೆ? ಅವಳೇ ಬರಲಿ! ನಿಮ್ಮ ಮಾದು! ರೋಗ ಕೊಟ್ಟವಳೇ ನಿಮ್ಮನ್ನ ನೋಡಿಕೊಳ್ಳಲಿಕ್ಕೆ ಬಂದಾಳು! (ಹೊರಟು ಹೋಗುವಳು.)

ರಂಗ—(ಕ್ಷಣಕಾಲ ಸುಮ್ಮನಿದ್ದು—ಪಶ್ಚಾತ್ತಾಪದಿಂದ) ಅಹುದು. ಹೆಂಗುಸು ನನ್ನ ಹಿತಕ್ಕಾಗಿ ತನ್ನ ಆಭರಣಗಳನ್ನೆಲ್ಲಾ ಒಪ್ಪಿಸಿಕೊಟ್ಟಾಗ ಅದನ್ನು ಸಿಕ್ಕಿದಂತೆ ಖರ್ಚು ಮಾಡಿ ಕೆಡಿಸಿಬಿಟ್ಟೆ! ಮತ್ತೀಗ–ನಾಯಿಗಿಂತಲೂ ಕೀಳಾಗಿ ಕಾಲು ಬುಡದಲ್ಲಿ ಕೊಳೆತು ಬಿದ್ದಾಗ-ಹೆಂಗುಸು ಮತ್ತೆ ಜರೆಯುವುದು ತಪ್ಪೆ? ಸುಸ್ಥಿತಿಯು ಬಂದೊದಗಿದಾಗ-ಸುಖದ ಸವಿಯನ್ನು ಅನುಭವಿಸಲಿಕ್ಕೆ ಹೆಂಡತಿಯು ಸಾಲದೆ ಹೋದಳು! ಅದು ಕಳೆದು-ಹೋಗಿ ಪುನರಪಿ ದುಃಖವೇ ಪೀಡಿಸತೊಡಗಿದಾಗ–ಹೆಂಡತಿ ಮತ್ತೆ ಕೆಣಕದಿರುವಳೇ? (ತಲೆದೂಗುತ್ತ) ಸಹಜ!

(ಮೌನವಾಗಿ ಅಳುತ್ತ ತಲೆಬಾಗಿ ಕುಳಿತಿರುವನು.)

(ಹೊರಗಣಿಂದ) ಆಚಾರ್‍ರ್ರೇ! ಆಚಾರ್‍ರ್ರೇ!!

ರಂಗ—ಯ್ಯಾರದು? ಬನ್ನಿಯೊಳಕ್ಕೆ!

(ಅರ್ಧ ಚಲ್ಲಣ-ಕಾಕಿ ಶರ್ಟಿನ ಆಳೊಬ್ಬ ಬರುವನು.)

ರಂಗ—ಏನು?

ಆಳು—ನಿಮ್ಮದು ಥಿಯೇಟರಿನ ಬಾಡಿಗೆ ಹಣ ಬಾಕಿಯಿದೆಯಂತೆ. ಅದನ್ನು ರಾಯರು ಈ ಕೂಡಲೇ ಕೇಳಿ ತರಲಿಕ್ಕೆ ಹೇಳಿದ್ದಾರೆ.

ರಂಗ—ನಾಳೆ ನಾಡದಿನಲ್ಲಿ—

ಆಳು—(ಕಣ್ಣು ಕೆರಳಿಸಿ) ಅದೆಲ್ಲಾ ಸಾಧ್ಯವಿಲ್ಲ! ಈಗ-ಈಗಿಂದೀಗ ಆ 64 ರೂಪಾಯಿ ಸಿಗಬೇಕು! ಇಲ್ಲವಾದರೆ (ದರ್ಪದಿಂದ) ರಟ್ಟಿಗೆ ಕೈ ಹಾಕಿ ಎಳೆದುಕೊಂಡು ಬರುವ ಹಾಗೆ ರಾಯರ ಹುಕುಂ ಆಗಿದೆ!

ರಂಗ—(ಯೋಚಿಸಿ, ದೈನ್ಯದಿಂದ) ಆ ರುಪಾಯಿಗೆ ನಮ್ಮ ಪರದೆ-ಸಾಮಾನುಗಳನ್ನೆಲ್ಲಾ ಇಟ್ಟುಕೊಳ್ಳಲಿಕ್ಕೆ ಹೇಳಪ್ಪ!

ಆಳು—ಅದೆಲ್ಲಾ ವಜಾ ತೆಗೆದೇ 64 ರುಪಾಯಿ!

ರಂಗ—(ಆಶ್ಚರ್ಯದಿಂದ) ಏನು?

ಆಳು—ಏನೂಂದ್ರೆ ಒಳ್ಳೇದು! ರುಪಾಯಿ ಕೊಟ್ಟುಬಿಡಿ.

ಗೋದು—(ಗಾಬರಿಯಿಂದ) ಏನು? ನಿಮ್ಮ ನಾಟಕಾನೂ ಮುಳುಗಿ ಹೋಯಿತೆ? ಹಾಗಾದರೆ ನನ್ನ ಚಿನ್ನ? (ಅಳುತ್ತಾ) ಅಯ್ಯೋ! ನನ್ನ ಚಿನ್ನ ಹೋಯಿತೆ! ನನ್ನ ಚಿನ್ನ! ಆ ಮಿಸ್ರೀ ಸರ-ಕಂಠೀ ಸರ–ಮೂರೆಳೆ ಚೈನು-! ಅಯ್ಯೋ! ನನ್ನ ಚಿನ್ನ! (ಹುಚ್ಚಿಯಂತೆ ತಲೆ ಬಡಿದುಕೊಳ್ಳುವಳು.)

ಆಳು—(ಅಂಜಿ ಮೆಲ್ಲಮೆಲ್ಲನೆ ಹಿಂದೆ ಸರಿದು ಹೊರಟು ಹೋಗುವನು.)

ಗೋದು—ಅಯ್ಯೋ! ನನ್ನ ಚಿನ್ನ-ಚಿನ್ನ-ಚಿನ್ನ-! ಅಯ್ಯೋ! (ಅಳುತ್ತಾ ತಲೆ ಕೆದರಿಕೊಂಡು ಒಂದು ಮೂಲೆಯಲ್ಲಿ ಕ ಳಿತು ಕೊಳ್ಳುವಳು.)

ರಂಗ—(ನಿಟ್ಟುಸಿರುಬಿಟ್ಟು) ಅಯ್ಯೋ! ಇನ್ನು ಹೆಂಗಸಿಗೆ ಹುಚ್ಚು ಹಿಡಿದು, ಬೀದಿಬೀದಿ ತಿರುಗೋದನ್ನು ಕಣ್ಣಾರೆ ಕಾಣ ಲಿದೆಯೋ ಏನೋ! (ಸ್ವಲ್ಪ ತಡೆದು, ಹುಚ್ಚನಂತೆ)

ಅಯ್ಯೋ! ರಂಗಾಚಾರಿ! ಬೇಡ; ಜನ್ಮ ಜನ್ಮಗಳಲ್ಲೂ ನಾಟಕದ ಹುಚ್ಚು ನಿನಗೆ ತಗಲೋದು ಬೇಡ! ನಿನ್ನ ಶತ್ರು ಗಳಿಗೂ-ಪರಮ ಶತ್ರುಗಳಿಗೂ ಇದರ ಸುದ್ದಿ ಬೇಡಪ್ಪಾ-ಬೇಡ!

(ಬಾಗಿಲ ಬಳಿ ಹುಡುಗನೊಬ್ಬನು ಒಂದು ನೋಟೀಸು ಬೋರ್ಡು ತಂದಿಟ್ಟು ಓಡಿ ಹೋಗುವನು. ಅದರಲ್ಲಿ ಚೋಕಿ ನಿಂದ ಬಿಡಿಸಿದ ವಿಕಾರದ ಮನುಷ್ಯನ ಚಿತ್ರವೊಂದು—ಮೇಲ್ಗಡೆ ಪ್ರೊಪ್ರ್ಯಾಟರ್—ಮಗ್ಗುಲಲ್ಲಿ ದೊಡ್ಡಕ್ಷರದಲ್ಲಿ—ದಿವಾಳಿ— ಎಂದು ಬರೆದಿದೆ—ಅದರ ವಿಧಾನ—)




ರಂಗ—(ಮೆಲ್ಲನೆ) ಏನದು? (ಕಷ್ಟದಿಂದೆದ್ದು ಹೋಗಿ ತಂದು ಅದನ್ನೇ ನೋಡುತ್ತಾ ಕುಳಿತಿರುವನು.)

–ಹೊರಗಣಿಂದ–

ಆಚಾರ್ರೇ!

ಬಾತ್ಮಿ—(ಬಂದು) ನಮಸ್ಕಾರ ಆಚಾರ್‍ರ್ರಿ! ನೋಡಿ ಈ ತಡವೆಯ ಪೇಪರ್! ನಿಮ್ಮ ರಂಗಭೂಮಿಯ ಸೇವೆ-ಸಾಹಸ-ನಾಟ್ಯಕಲೆಯ ಪ್ರೇಮ-ಉಜ್ವಲ ಸ್ವಾರ್ಥತ್ಯಾಗ-.

ಗೋದು—(ಮೂಲೆಯಲ್ಲಿ ಕುಳಿತಿದ್ದಂತೆ-ಹುಚ್ಚಿಯಂತೆ ಅಳುತ್ತಾ) ಅಯ್ಯೋ! ನನ್ನ ಚಿನ್ನ-ಚಿನ್ನ! ಅಯ್ಯೋ! ಚಿನ್ನ-!

ಬಾತ್ಮಿ—(ಬೆಚ್ಚಿಬಿದ್ದು) ಏನದು? (ಆಕಡೆ ತಿರುಗುವನು.)

ರಂಗ—(ನೋಟೀಸ್ ಬೋರ್ಡನ್ನು ನೋಡುತ್ತಾ--ತನ್ನಷ್ಟಕ್ಕೆ) ಪ್ರೊಪ್ರೈಟರ್—ದಿವಾಳಿ!—ಪ್ರೊಪ್ರೈಟರ್ - - - -

ಬಾತ್ಮಿ—(ಗಾಬರಿಯಿಂದ) ಆಚಾರ್‍ರ್ರೀ!

ರಂಗ—(ಶೂನ್ಯದೃಷ್ಟಿಯಿಂದ ಮುಂಗಡೆ ನೋಡುತ್ತಾ-ಕರುಣಾತ್ಮಕವಾಗಿ)

**ದಿ ವಾ ಳಿ !**

—ಮೆಲ್ಲಮೆಲ್ಲನೆ ರಂಗಭೂಮಿಗೆ ಕತ್ತಲೆ ಕವಿಯುವುದು—

**(ಪರದೆ ಬೀಳುವುದು.)**

---

# ತೊದಲ್ನುಡಿ ಗ್ರಂಥಮಾಲೆ, ಉಡುಪಿ.

ಸ್ಥಾಪನೆ: 1930

**ಪ್ರಾರ್ಥನೆ**—ಸಾಹಿತ್ಯಗಳ ಮೇಲಾಟದ ಕಾಲವಿದು. ಕನ್ನಡವೂ ಅವುಗಳ ಸಹಪಂಕ್ತಿಯಲ್ಲಿ ತಲೆಯೆತ್ತಿ ನಿಂತು ಸ್ಪರ್ಧಿಸಲೆಂದು ಹಿರಿಯರ ಪ್ರಯತ್ನ. ಅವರ ಪ್ರಯತ್ನದಲ್ಲಿ ತುಸು ಬೆಂಬಲದ ಸೇವೆಯನ್ನು ಮಾಡಬೇಕೆಂದು 'ಕಿರಿಯರ' ಭಾವನೆ. ಈ ಭಾವನೆಯೇ ದೈವಪ್ರೇರಣೆಯಿಂದ 'ಕಿರಿಯರ ಪ್ರಪಂಚ'ವಾಗಿ ತಲೆಯೆತ್ತಿರುವುದು.

ಸಮಾಜದ ಏರಿಳಿಕೆಗಳು ಅದರ ಆಚಾರದಲ್ಲಡಕವಾಗಿವೆ. ಆಚಾರದ ಒಳಿತು ಹೀನತೆಗಳು ವಿಚಾರದ ಕೈಯೊಳಗಿವೆ. ಇಂತಹ ಸುವಿಚಾರದ ಪಡಿಯಚ್ಚುಗಳನ್ನು ಸಾಧ್ಯವಾದ ಮಟ್ಟಿಗೆ ಸಂಗ್ರಹಿಸಿ ಸಮಾಜದ ಮುಂದಿಡುವುದೇ 'ಕಿರಿಯರ ಪ್ರಪಂಚ'ದ 'ತೊದಲ್ನುಡಿ' ಗ್ರಂಥಮಾಲೆಯ ಹಿರಿಗುರಿ. ಮಾಲೆಯಲ್ಲಿ ಈ ಪಡಿಯಚ್ಚುಗಳು ಕಥೆ, ಕಾದಂಬರಿ, ಕವನ, ನಾಟಕಾದಿಗಳ ರೂಪದಲ್ಲಿ ಹೊರಬೀಳುವವು. ಈ ನಮ್ಮ ಕಾರ್ಯದಲ್ಲಿ ಭಾಷಾಭಿಮಾನಿಗಳೂ ದೇಶಾಭಿಮಾನಿಗಳೂ ಕೈಕೊಟ್ಟು ಸಹಕರಿಸಿ ನಮ್ಮಿಂದ ಸೇವೆಯನ್ನು ಮಾಡಿಸಿಕೊಳ್ಳಬೇಕಾಗಿ ಪ್ರಾರ್ಥನೆ. ಸಂಘವು ಈ ಕೆಳಗಿನಂತೆ ಸಹಾಯವನ್ನಪೇಕ್ಷಿಸುತ್ತದೆ.

೧. **ಸ್ಥಾಪಕರು**—ಗ್ರಂಥಮಾಲೆಗೆ ರೂ. ೫೦ ಯಾ ಹೆಚ್ಚು ಕೊಟ್ಟವರು. ಇವರಿಗೆ ಗ್ರಂಥಮಾಲೆಯ ಎಲ್ಲಾ ಪುಸ್ತಕಗಳನ್ನು ಕೊಡುವೆವಲ್ಲದೆ ಆ ಎಲ್ಲಾ ಗ್ರಂಥಗಳಲ್ಲಿಯೂ ಇವರ ಹೆಸರನ್ನು ಪ್ರಕಟಿಸುವೆವು.

೨ **ರಕ್ಷಕರು**—ರೂ. ೨೫ ಕೊಟ್ಟವರು. ಇವರಿಗೆ ಗ್ರಂಥಗಳನ್ನು ಕೊಡುವೆವು. ೧೫ ಗ್ರಂಥಗಳಲ್ಲಿ ಹೆಸರನ್ನು ಪ್ರಕಟಿಸುವೆವು.

೩ **ಆಶ್ರಯದಾತರು**—ರೂ ೧೦ ಕೊಟ್ಟವರು. ಇವರಿಗೆ ೧೦ ವರ್ಷಗಳ ವರೆಗೆ ಗ್ರಂಥಗಳನ್ನು ಕೊಡುವೆವು. ೧೦ ಗ್ರಂಥಗಳಲ್ಲಿ ಹೆಸರನ್ನು ಪ್ರಕಟಿಸುವೆವು.

೪ **ಪೋಷಕರು**—ರೂ. ೫ ಕೊಟ್ಟವರು. ಇವರಿಗೆ ೫ ವರ್ಷಗಳ ವರೆಗೆ ಗ್ರಂಥಗಳನ್ನು ಕೊಡುವೆವು. ೫ ಗ್ರಂಥಗಳಲ್ಲಿ ಹೆಸರನ್ನು ಪ್ರಕಟಿಸುವೆವು.

೫. **ಚಂದಾದಾರರು**—ಆರಂಭದಲ್ಲಿ ರೂ. ೧ ಪ್ರವೇಶಧನವಿತ್ತು ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನು ಪಡೆಯುವವರು. ಇವರಿಗೆ ¾ ಬೆಲೆಗೆ ಗ್ರಂಥಗಳು ಕೊಡಲ್ಪಡುವವು.

**ಕಾರ್ಯದರ್ಶಿ, ಕಿರಿಯರ ಪ್ರಪಂಚ.**

ಈ ವರೆಗೆ ಪ್ರಕಟವಾದ

## 'ತೊದಲ್ನುಡಿ ಗ್ರಂಥಮಾಲೆ'ಯ ಪುಸ್ತಕಗಳು ಮತ್ತು ಅವುಗಳ ಕುರಿತು ಅಭಿಪ್ರಾಯಗಳು

— ನುಡಿ ೧ —

## ಸ್ವತಂತ್ರ ಜೀವನೋಪಾಯ ಬೆಲೆ ೦-೨-೬

ಬರೆದವರು: ಶ್ರೀ ಕೆ. ಹೊನ್ನಯ್ಯ ಶೆಟ್ಟಿ.

ಜೀವನದ ಹೋರಾಟವನ್ನು ಕಣ್ಣು ಮುಂದಿರಿಸಿ ಸ್ವತಂತ್ರಜೀವನ ನಡೆಸುವ ವಿಧಾನವನ್ನು ವಿವರಿಸುವ ಚಿಕ್ಕ ನಾಟಕ.

(ಮದರಾಸು, ಬೊಂಬಾಯಿ, ಮೈಸೂರು ಟೆಕ್ಸ್ಟ್‌ಬುಕ್ ಕಮಿಟಿಗಳಿಂದ ಮಂಜೂರಾಗಿದೆ)

'ಉಡುಪಿಯ ಕೆಲವು ಉತ್ಸಾಹೀ ತರುಣರು ಕೂಡಿ 'ತೊದಲ್ನುಡಿ ಗ್ರಂಥಮಾಲೆ'ಯೆಂಬುದನ್ನು ಹೊರಡಿಸಿರುವರು. ಅದರ 'ಮೊದಲನುಡಿ ಯಿದು. ನಾಟಕೆಯ ರೂಪದಲ್ಲಿ ಬರೆಯಲಾಗಿದೆ...ಸಂವಾದದಲ್ಲೆಲ್ಲ ಪ್ರತಿ ಯೊಂದು ದೃಶ್ಯದಲ್ಲಿ, ಗಾದೆಗಳೂ ನಾನಾ ಉಪಮೆಗಳೂ ಅವಿರಳವಾಗಿ ಪೋ ಣಿಸಲ್ಪಟ್ಟಿವೆ. ಶೈಲಿಯು ಚಲೋದಿದೆ. ಇವರ ನುಡಿಗಳು ಹೆಚ್ಚಿ, 'ಕಿರಿಯ ರ ಪ್ರಪಂಚ'ವು ಹಿರಿದೆನಿಸಲೆಂದು ಹಾರೈಕೆ.' —ಕಂಠೀರವ

ಈಗಣ ನಿರುದ್ಯೋಗ, ದುಂದುಗಾರಿಕೆ, ಮೊದಲಾದ ಪರೋಪಜೀವನ ಗಳಿಗೆ ಜನರು ಬಲಿಬೀಳದೆ, ಬೇರೆ ಬೇರೆ ವೃತ್ತಿಗಳಲ್ಲಿ ನಿರತರಾಗಿ, ಸ್ವಾಭಿಮಾನ ದಿಂದ ಸ್ವತಂತ್ರ ಜೀವನ ನಡೆಸುವಂತೆ ಚತುರ ಶಿಕ್ಷಿತ ತರುಣರು ಹಳ್ಳಿಗಳ ಸಂಘಟನಾಕಾರ್ಯವನ್ನು ಕೈಕೊಂಡು ಯಾವ ರೀತಿಯಲ್ಲಿ ಕೆಲಸಮಾಡ ಬೇಕೆಂಬ ಆದರ್ಶವನ್ನು ಈ ಚಿಕ್ಕ ವಹಿಯಲ್ಲಿ ನಿರ್ದೇಶಿಸಲಾಗಿದೆ. ಕರ್ನಾಟ ಕದ ಹಿರಿಯರ ಸಾಹಿತ್ಯ ಸೇವೆಗೆ ಬೆಂಬಲವೀಯಬೇಕೆಂಬ ಈ 'ಕಿರಿಯರ ಪ್ರಪಂಚ'ದ ಹಿರಿದಿಚ್ಛೆಯು ತಕ್ಕ ಆಶ್ರಯ ಪ್ರೋತ್ಸಾಹ ದೊರೆತು ಸಾರ್ಥಕವಾಗಿ, ಕಿರಿಯರು ಹಿರಿಯರಾಗಿಯೇ ಮೆರೆವಂತಾಗಲೆಂದು ಹಾರೈಕೆ.' —ನವಯುಗ .

— ನುಡಿ ೨ —

## ಸಂಶಯ ಪಿಶಾಚಿ ಬೆಲೆ ೦-೬-೦

ಬರೆದವರು: ಶ್ರೀ ಕೆ. ಕೆ. ಶೆಟ್ಟಿ.

(ಮದರಾಸು, ಬೊಂಬಾಯಿ, ಮೈಸೂರು ಟೆಕ್ಸ್ಟ್ ಬುಕ್ ಕಮಿಟಿಗಳಿಂದ ಮಂಜೂರಾಗಿದೆ.)

ಅಳಿಯ ಸಂತಾನಕಟ್ಟಿನ, ಮುಖ್ಯವಾಗಿ ಬಂಟ ಸಮಾಜದ ಸದ್ಯದ ನಡವಳಿಗೆಯನ್ನೂ ಅದರಿಂದುಂಟಾಗುವ ದುಷ್ಪರಿಣಾಮಗಳನ್ನೂ ಚಿತ್ತವೇದಕವಾಗಿ ಚಿತ್ರಿಸಿ ಸಮಾಜದೇಳಿಗೆಯ ಮಾರ್ಗವನ್ನು ಸೂಚಿಸುವ ನಾಟಕ.

'ಇದೊಂದು ಸಾಮಾಜಿಕ ನಾಟಕ. ಇದರಲ್ಲಿ ವಾಸ್ತವಿಕ ಸ್ಥಿತಿಗತಿಯೇ ಚಿತ್ರಿತವಾಗಿದ್ದು ಮಂಗಳೂರೇ ಕಥಾಕ್ಷೇತ್ರವಾಗಿದೆ. ಪಾತ್ರಗಳ ಸಂಭಾಷಣೆಯ ಪ್ರತಿ ಶಬ್ದವೂ ಭಾವಭರಿತವಾಗಿರುತ್ತದೆ. ಇದು ಆಧುನಿಕ ಶೈಲಿಯಿಂದ ಮನೋರಂಜಕವಾಗಿದೆ. ಪೂರ್ವಾಚಾರ ವಿಚಾರಗಳೆಂಬ ಪ್ರೇತಬಾಧೆಯಿಂದ ನಮ್ಮ ಸಮಾಜವು ದಿನೇ ದಿನೇ ಅಧಃಪತನ ಹೊಂದುತ್ತಿರುವ ಕಾಲದಲ್ಲಿ ಇಂತಹ ಪುಸ್ತಕಗಳು ಹೊರಬೀಳುವುದು ಶುಭಚಿಹ್ನೆಯಾಗಿದೆ. ಎಲ್ಲರೂ ಓದಿ ಪ್ರೋತ್ಸಾಹಿಸಬೇಕು. —ಸ್ವದೇಶಾಭಿಮಾನಿ.

— ನುಡಿ ೩ —

## ನಾಡ ಕಥೆಗಳು ಬೆಲೆ ೦-೨-೦

ಬರೆದವರು: ವಿವಿಧ ಕತೆಗಾರರು.

ದಕ್ಷಿಣ ಕನ್ನಡ ಜಿಲ್ಲೆಯ ಪಿವಿಧ ಆಚಾರಾಂಧತೆಗಳ ಪಡಿಯಚ್ಚುಗಳನ್ನು ನೋಡಲಿಚ್ಛಿಸುವವರಿಗೆ ಒಂದೆಡೆ ಕೂಡಿಸಿಟ್ಟ ಚಿಕ್ಕ ಕಥೆಗಳ ಚೊಕ್ಕ ಪುಸ್ತಕ.

'ಈ ಪುಸ್ತಕದಲ್ಲಿ ಬೇರೆ ಬೇರೆ ಜನರು ಬರೆದ, ಸಮಾಜದ ಸ್ವಾಭಾವಿಕ ಚಿತ್ರಗಳನ್ನೊಳಗೊಂಡ ಕಥೆಗಳಿವೆ. 'ತಿರುಪತಿ ಮುಡುಪಿನ ಕಳವು' ಎಂಬ

ವದರಲ್ಲಿ ಬರುವ ಶೆಟ್ಟರು ಭಟ್ಟರು ಎಲ್ಲೆಲ್ಲಿಯೂ ನೋಡಲು ಸಿಕ್ಕುವರು.... 'ಶೆಟ್ರ ಮನೆಯ ಮದುವೆ' ಎಂಬ ಕತೆಯಲ್ಲಿ ಎಡೆಯಾಡುತ್ತಿದ್ದ ಚುಚ್ಚು ನಗೆಯು ವಾಚಕರಿಗೆ ನಗೆಯೊಡನೆ ಮೈ ಜುಮ್ಮನ್ನೂ ಹುಟ್ಟಿಸುವುದು...'ಅಂದು ಇಂದು' ಎಂಬುದು ಸೊಗಸಾದ ಸಣ್ಣ ಕಥೆ. ಹೇಳುವ ಮಾತಿನ ರೀತಿಯೂ ಚೆನ್ನಾಗಿದೆ....ಇಲ್ಲಿಯ ಈ ತರುಣ ಕಥಾಲೇಖಕರ ಭವಿಷತ್ ಕಾರ್ಯದ ಕಡೆಗೆ ಹೆಚ್ಚು ಆಶೆಯ ನೋಟದಿಂದ ನಾವು ನೋಡುತ್ತಿದ್ದೇವೆ. —ಜಯಕರ್ಣಾಟಕ.

'...ಸಣ್ಣ ಕಥೆಗಳ ಸಂಗ್ರಹ. 'ನಮ್ಮ ಶಾಸ್ತ್ರಗಳು' ಎಂಬ ಕತೆಯು ಹೃದಯಂಗಮವಾಗಿದೆ. 'ಅಂದು ಇಂದು' ಎಂಬ ದೃಶ್ಯವು ಮನೋಹರವಾಗಿದೆ...ಇವರ ಪ್ರಯತ್ನಗಳಿಗೆ ಶ್ರೇಯಸ್ಸನ್ನು ಕೋರುವೆವು. —ಕಂಠೀರವ.

'...ಕಥೆಗಳಿವೂ ನಮ್ಮ ಹಿಂದೂ ಸಮಾಜದಲ್ಲಿ, ಪುಣ್ಯ-ಪಾಪಗಳು, ಆಚಾರ ವಿಚಾರಗಳು, ಸಂಪ್ರದಾಯ, ಧರ್ಮಗುರುಗಳು ಇವುಗಳ ಮುಸುಕಿನಲ್ಲಿ ನಡೆಯುತ್ತಿರುವ ಹಲವು ಅನನ್ವಿತ ವಿಷಯಗಳನ್ನೆಲ್ಲ ತಕ್ಕ ಉದಾಹರಣೆಗಳಿಂದ ವಿವರಿಸಿ, ಕಾಲ ದೇಶಗಳನ್ನನುಸರಿಸಿ ಪೂರ್ವಾಚಾರಗಳಲ್ಲಿ ಸುಧಾರಣೆಯಾಗ ತಕ್ಕುದು ಅವಶ್ಯವೆಂಬ ತತ್ವವನ್ನು ಸಮರ್ಥಿಸುತ್ತವೆ. ಎಲ್ಲರೂ ಓದಿ ಮನನ ಮಾಡಬೇಕಾದ ಪುಸ್ತಕ. —ಸುಬೋಧ.

— ನುಡಿ ೪ —

**ಕುಶ-ಲವ** (ತೃತೀಯ ಮುದ್ರಣ) **ಬೆಲೆ ೦—೪—೦**

ಬರೆದವರು: **ಶ್ರೀ ಕೆ. ಕೆ. ಶೆಟ್ಟಿ.**

ಹಳೆಯ ಕಥೆಯನ್ನು ಹೊಸ ಮಾದರಿಯಲ್ಲಿ ಎರಕ ಹೊಯ್ದ ಪೌರಾಣಿಕ ನಾಟಕವಿದು. ಈಗಿನ ಶಿಕ್ಷಣದಲ್ಲಿರುವ ದೋಷಗಳನ್ನು ಎತ್ತಿ ತೋರಿಸಿ, ಸುಧಾರಣೆಯ ಹಾದಿಯನ್ನು ಸೂಚಿಸುವ ಪುಸ್ತಕ.

(ಮದ್ರಾಸು, ಬೊಂಬಾಯಿ, ಮೈಸೂರು ಟೆಕ್ಸ್ಟ್ ಬುಕ್ ಕಮಿಟಿಗಳಿಂದ ಮಂಜೂರಾಗಿದೆ.)

— ನುಡಿ ೫ —

## ಕಾವ್ಯಸಾಮ್ರಾಜ್ಯ (ದ್ವಿತೀಯಾವೃತ್ತಿ) ಬೆಲೆ ೦-೧೨-೦

ಬರೆದವರು: **ವಿವಿಧ ಕವಿಗಳು.**

(ಮದ್ರಾಸು, ಬೊಂಬಾಯಿ, ಮೈಸೂರು ಟೆಕ್ಸ್ಟ್ ಬುಕ್ ಕಮಿಟಿಗಳಿಂದ ಮಂಜೂರಾಗಿದೆ.)

(ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಮುನ್ನುಡಿಯೊಡನೆ.)

'...ಆಧುನಿಕ ಕವಿಗಳ ಕವಿತೆಗಳ ಇಂತಹ ಉತ್ತಮ ಸಂಗ್ರಹವನ್ನು ಈ ವರೆಗೆ ಯಾರೂ ಒದಗಿಸಿ ಕೊಟ್ಟಿರುವುದಿಲ್ಲ. ಇದಕ್ಕಾಗಿ ಕನ್ನಡಿಗರು 'ಕಿರಿಯರ ಪ್ರಪಂಚ'ಕ್ಕೆ ಆಭಾರ ಮನ್ನಿಸಬೇಕು. ಆದರೆ ಶಬ್ದದಿಂದಲ್ಲ; 'ಕಾವ್ಯಸಾಮ್ರಾಜ್ಯ'ವನ್ನು ಕೊಂಡುಕೊಂಡು ಧನರೂಪದಿಂದ'

ಸಂಯುಕ್ತ ಕರ್ನಾಟಕ.

## OPINION OF THE 'HINDU', MADRAS

**Kavya Samrajya**— Published by Kiriyara Prapancha, Udipi.

RRICE 0-12-0

When the country is in the throes of a new awakening, every attempt to advance the nation's cause should be welcomed. The national edifice, to be lasting, has to be built on the sure foundation of culture. When so many modern thoughts, some of an alien origin, are seemingly in conflict with established traditions of the country the need of directing young mind, in the proper direction becomes all the more pressing. The book under review is a collection of poems written by various

authors of the Kannada speaking portion of the country. The topics are varied. Some of the compositions offer light reading, while others are thought-provoking; but through all there runs the spirit of awakened India, with a nationalistic outlook on life, and great love for the country; its language and culture. Kiriyara Prapancha has chosen the poems carefully and though the poets are modern and young, the work is such as to appeal to young and old alike.

'...ಆಧುನಿಕ ಕವಿಗಳ ಕವನಗಳ ಸಂಗ್ರಹವಿದು. ಉತ್ಸಾಹಿಗಳಾದ 'ಕಿರಿಯರು' ಮಾಡಿದ ಸಾಹಸವನ್ನು ನೋಡಿ ಕೌತುಕವೆನಿಸಿತು'.-ಜಯಕರ್ನಾಟಕ.

'...ಗ್ರಂಥವೂ ಒಳಗಿನ ವಿಷಯವೂ ಎರಡೂ ಅಂದವಾಗಿವೆ. ತಮ್ಮ ಸಾಹಿತ್ಯಸೇವೆ ಯಶಸ್ವಿಯಾಗಿ ಮುಂದುವರಿಯಲೆಂದು ಹಾರೈಸುತ್ತೇನೆ'.

—ತಿ. ನ. ಶ್ರೀಕಂಠಯ್ಯ.

'ಒಳಗೂ ಹೊರಗೂ 'ಸಾಮ್ರಾಜ್ಯ'ವು ಅಂದವಾಗಿದೆ. ಎಲ್ಲ ಭಾಗಗಳ ಕವಿಗಳ ಕೃತಿಗಳು ಪ್ರಾತಿನಿಧಿಕವಾಗಿ ಅದರಲ್ಲಿ ಬಂದು ನಿಂತಿವೆ...ಅತ್ಯಂತ ಸ್ತುತ್ಯವಾಗಿದೆ'. —ವಿ. ಕೃ. ಗೋಕಾಕ.

'...ಕಾವ್ಯಸಾಮ್ರಾಜ್ಯ'ವು ಕನ್ನಡ ಆಧುನಿಕ ಸಾಹಿತ್ಯಕ್ಕೆ ರತ್ನಪ್ರಾಯವಾಗಿದೆ'. —ಡಾ. ಟಿ. ಮಾಧವ ಪೈ, M. B. & B. S.

'...ಕಾವ್ಯಸಾಮ್ರಾಜ್ಯದಲ್ಲಿ ವಿಶ್ವಕರ್ನಾಟಕದೊಳಗಿನ ಬಹುಶಃ ಎಲ್ಲಾ ಪ್ರಮುಖ ಕವಿಗಳ ಕವನಗಳ ಆಯ್ಕೆಯೊಂದನ್ನು ಕೊಡುವ ಪ್ರಯತ್ನಮಾಡಲಾಗಿದೆ...ಅದರ ಬಾಹ್ಯಾಂಗವು ನಯನ ಮನೋಹರವಾಗಿರುವಂತೆಯೇ ಅಂತರಂಗವೂ ಚೇತೋಪಹಾರಿಯಾಗಿದೆ'.

ಹನುಮಂತರಾವ್ ಮಾಂಜರೇಕರ, B. A. (ಕಾನಡಾವೃತ್ತದಲ್ಲಿ)

'...ಕವಿತೆಗಳ ಸವಿಯನ್ನುಣ್ಣಬೇಕಾದರೆ 'ಕಾವ್ಯಸಾಮ್ರಾಜ್ಯ'ವನ್ನೇ ಹೊಕ್ಕು ನೋಡಬೇಕು; ಕರಿಸಿ ಓದಬೇಕು. ಈ ಸರ್ವ ಶ್ಲಾಘನೀಯ ಯತ್ನವನ್ನು ಪ್ರೋತ್ಸಾಹಿಸದಿದ್ದರೆ ಮತ್ತಾವುದನ್ನು?' —ಬಡವರ ಬಂಧು.

'...ಕರ್ನಾಟಕದ ಎಲ್ಲಾ ಪ್ರಾಂತ್ಯಗಳ ಕವಿಗಳ ಕೃತಿಗಳೂ ಇಲ್ಲಿ ಆಯ್ದು ಸೇರಿಸಲ್ಪಟ್ಟಿವೆ. ಕಥಕ, ವರ್ಣಕ, ಭಾವೋದ್ಯೋತಕವಾದ ಎಲ್ಲಾ ಬಗೆಯ ಕವಿತೆಗಳೂ ಸೇರಿವೆ...' —ಪ್ರಬುದ್ಧ ಕರ್ನಾಟಕ.

'...ಕವಿಕುಲ ತಿಲಕರ ಕವನಗಳನ್ನು ಪೋಣಿಸಿ|ಈ 'ಕಾವ್ಯಸಾಮ್ರಾಜ್ಯ'ವೆಂಬ ಮಾಲೆ ಮಾಡಿ 'ಕಿರಿಯರ ಪ್ರಪಂಚ'ವು ಕನ್ನಡಿಗರ ಕೊರಳಿಗೆ ಹಾಕಿರುವುದು. ಕವಿತಾ ವಾಚಕ ವರ್ಗವು ಅದರ ಸುಗಂಧವನ್ನಾಘ್ರಾಣಿಸಿ ಆನಂದಿಸದಿರದು. ಸುಲಭ ಬೆಲೆಗೆ ಇಂತಹ ಉಚ್ಚ ಸಾಹಿತ್ಯವನ್ನೊದಗಿಸುತ್ತಿರುವ ಪ್ರಪಂಚಕ್ಕೆ ಹಿರಿಯರ ಬೆಂಬಲವೂ ಕನ್ನಡಿಗರ ಪ್ರೋತ್ಸಾಹವೂ ಯಥೇಷ್ಟ ದೊರೆತು 'ಮಾಲೆ'ಯು ನಮ್ಮ ಜಿಲ್ಲೆಗೇ ಭೂಷಣಪ್ರಾಯವಾಗುವಂತೆ ಬೆಳೆದು ಬರಲೆಂದು ಹಾರೈಸುವೆವು'. —ಸ್ವದೇಶಿ ಪ್ರಚಾರಕ.

— ನುಡಿ ೬ —

## ಮಧುವನ (ಕಥಾಸಂಗ್ರಹ) ಬೆಲೆ ೧—೮—೦

ಕತೆಗಳು ೨೫] ಮಧುವಿಗಿಂತ ಮಧುರ [೨೫೬ ಪುಟಗಳು

ಕತೆಗಳೊಂದಿಗೆ ಕತೆಗಾರರ ಪರಿಚಯಗಳಿವೆ, ಪಡಿಯಚ್ಚುಗಳಿವೆ.

(ಬೊಂಬಾಯಿ, ಮೈಸೂರು ಟೆಕ್ಸ್ಟ ಬುಕ್ ಕಮಿಟಿಗಳಿಂದ ಮಂಜೂರಾಗಿದೆ.)

'ಮಧುವನ'ವೆಂಬ ಕಥಾಸಂಗ್ರಹವನ್ನು ನಾನು ಓದಿ ನೋಡಿದ್ದೇನೆ. 'ನವಿಲುಗರಿ' 'ಕಾಮನ ಬಿಲ್ಲು' ಎಂಬ ಸಂಗ್ರಹಗಳು ಹೊರಟರೂ ಅಲ್ಲಿ ಕಾಣಬಾರದ ಹೆಸರುಗಳು ಕೆಲವು ಮಧುವನದಲ್ಲಿ ನಮಗೆ ಪರಿಚಿತವಾಗಿ ನಿಲ್ಲುತ್ತನೆ. 'ಮಧುವನ'ದ ಸಂಪಾದಕರ ಕೆಲಸವು ಸಣ್ಣದಲ್ಲ. ಹತ್ತು ಎಮ್ಮೆ ಹಾಲು ಕರೆದರೂ ಅದನ್ನು ಹೆಪ್ಪು ಹಾಕುವ ಹೊಣೆಯು ಅವರದಾಗಿದೆ. ಇದನ್ನು ಅವರು ಎಲ್ಲರೂ ಒಪ್ಪುವಂತೆ ಕೊನೆಗಾಣಿಸಿದ್ದಾರೆ. ಲೇಖಕ ಲೇಖಿಕೆಯರ ಭಾವಚಿತ್ರಗಳು, ಅವರ ಕೃತಿಗಳ ವಿಷಯದಲ್ಲಿ ಬರೆದ ವಿಮರ್ಶಾತ್ಮಕ ಟಿಪ್ಪಣಿಗಳು ಇವೆಲ್ಲ ಕೂಡಿ ಈ ಪುಸ್ತಕಕ್ಕೆ ಸಹಜವಾಗಿರುವ ಸೊಬಗನ್ನು ಹೆಚ್ಚಿಸಿವೆ. ಕಲೆಯ ದೃಷ್ಟಿಯಿಂದ ಇದೊಂದು ಉಚ್ಚ ತರಗತಿಯ ಕಥಾಸಂಗ್ರಹವಾಗಿದೆ. ಕನ್ನಡ ನಾಡಿನ ಕತೆಗಾರರು ಇಂದು ಯಾವ ಸುಳಿವನ್ನು ಹಿಡಿದು ಸಾಗುತ್ತಿರುವರೆಂಬುದನ್ನು ಈ ಸಂಗ್ರಹದ ಮೇಲಿಂದ ಚೆನ್ನಾಗಿ ತಿಳಿದುಕೊಳ್ಳಬಹುದು

ಮನೋರಂಜನೆಯ ಸಾಧನವೆಂದು ಓದುವವರಿಗೆ ಇದೊಂದು ಅಮೌಲ್ಯವಾದ ಗ್ರಂಥ· ಮನೆ-ಮನೆಯಲ್ಲಿ ಇರಬೇಕಾದುದು.

ಪುಣೆ, ೨೭-೩-೩೬ —ವಿ. ಕೃ. ಗೋಕಾಕ.

HINDU. 4th DEC: 1935.

**MADHUVANA**:—Published by Kiriyara Prapancha, Udipi, South Kanara. PRICE. 1-8-0

The Kiriyara Prapancha has been doing its best to encourage young men of letters in Karnataka and has to its credit a number of useful publications. The present volume is a worthy addition to them. The book is a collection of about twenty five short stories written by different persons some of whom have already made their mark in the literary world. The stories are of absorbing interest. The printing and get up of the book is good.

'...ಕತೆಗಾರರಲ್ಲಿ ಬಹುಶ್ರುತರಾದ ಪಂಡಿತ ತಾರಾನಾಥರು, 'ಸವ್ಯಸಾಚಿಸಾಹಿತಿ'ಗಳಾದ ಶ್ರೀ| ಅ. ನ. ಕೃಷ್ಣರಾಯರು, ಸಫಲ ಕವಿಗಳಾದ ಶ್ರೀ| ಕಡೆಂಗೋಡ್ಲು ಶಂಕರಭಟ್ಟರು, ಪ್ರತಿಭಾಸಂಪನ್ನರಾದ ಶ್ರೀ| ಶಿವರಾಮ ಕಾರಂತರು, ಹಿರಿಯರಾದ ಶ್ರೀ| ಎಂ. ಎನ್. ಕಾಮತರು, ಕಿರಿಯ ಕತೆಗಾರರಲ್ಲಿ ಚತುರರಾದ ಕುಡ್ವಿ ವಾಸುದೇವ ಶೆಣೈಯವರು, ಸಾಹಿತ್ಯಲೋಕದಲ್ಲಿ 'ಹೊಯಿಸಳ' ಎಂದು ಹೆಸರಾದ ಶ್ರೀ| ಅಗರನ್ ಲಕ್ಷ್ಮಣರಾಯರು, ನವಯುಗ ಸಂಪಾದಕರಾದ ಶ್ರೀ| ಕೆ. ಕೆ. ಶೆಟ್ಟಿ, 'ವ್ಯಂಗ್ಯವಿನೋದಿ'ಗಳೆನಿಸಿರುವ ಶ್ರೀ| ಮಂಗಳೂರು ಜಾರಪ್ಪ ಮುಂತಾದ ವಾಚಕರಿಗೆ ಪರಿಚಿತರಾದ ಹಲವರಿರುವರು. ಈ ಸಂಗ್ರಹಕಾರ್ಯದಲ್ಲಿ ಸಂಪಾದಕರು ಕೈಕೊಂಡ ಸಾಹಸ ಸ್ತುತ್ಯವಾಗಿದೆ. ಗದ್ಯಸಾಹಿತ್ಯವು ಒಂದು ವಿಧವಾಗಿ ರೂಪುಗೊಳ್ಳುತ್ತಿರುವ ಈ ಕಾಲದಲ್ಲಿ ಇಂತಹ ಸಂಗ್ರಹವು ಸಾಹಿತ್ಯದ ಪುರೋಗತಿಯ ಗುರುತಿನ ಪತಾಕೆ ಎಂದರೂ ಎನ್ನಬಹುದು'. —ಪ್ರಭಾತ.

'...ಇದು ಕರ್ನಾಟಕ ಪ್ರಾಂತದ ಬೇರೆ ಬೇರೆ ಪ್ರಾಂತದವರಿಂದ ಬರೆಯಲ್ಪಟ್ಟ ೨೫ ಕಥೆಗಳನ್ನೊಳಗೊಂಡ ಪುಸ್ತಕ. ಈ ವಿಷಯದಲ್ಲಿ ದೀರ್ಘ ಪ್ರಯತ್ನವನ್ನು ಕೈಕೊಂಡ ಉಡುಪಿಯ ಕಿರಿಯರ ಪ್ರಪಂಚದ ಚಾಲಕರನ್ನು ಅಭಿವಂದಿಸುತ್ತೇವೆ... ಪುಸ್ತಕದ ಹೆಸರು ಮನೋಹರವಾಗಿದೆ.

—ರಾಷ್ಟ್ರಬಂಧು.

'ಮಧುವನ' ಎಂಬ ಸೊಗಸಾದ ಕಥಾಸಂಗ್ರಹವು ಉಡುಪಿಯ ಕಿರಿಯರ ಪ್ರಪಂಚದ ಹಿರಿದಾದ ಸಾಹಸದ ಮಧುರವಾದ ಹಣ್ಣು. ಕಣ್ತಣಿಯುವ ಹೊರಮೈ, ಮನವೋಹಿಸುವ ಅಂತರಂಗದೊಂದಿಗೆ ಮಧುವನವು ಹೊರಬಿದ್ದಿದೆ. ನಮ್ಮ ನಾಡಿನಲ್ಲಿ ಈ ಮೊದಲು ಅನೇಕ ಕಥಾ ಸಂಗ್ರಹಗಳು ಪ್ರಕಟವಾಗಿರಬಹುದು. ಆದರೆ ಕತೆಗಾರರ ಛಾಯಾ ಚಿತ್ರಗಳೊಂದಿಗೆ ಕಥಾಸಂಗ್ರಹವನ್ನು ಪ್ರಕಟಿಸಿ ಅಭಿನಂದನೀಯವಾದ ಕೆಲಸವನ್ನು ಮಾಡಿದ ಕೀರ್ತಿಯು 'ಪ್ರಪಂಚ'ಕ್ಕೆ ಸಲ್ಲುತ್ತದೆ. ಕನ್ನಡಕ್ಕಿಂತ ಎಷ್ಟೋ ಮುಂದುವರಿದ ಮರಾಠೀ ಭಾಷೆಯಲ್ಲಿಯೂ ಇಂತಹ ಸಾಹಸವನ್ನು ಇನ್ನೂ ಯಾರೂ ಕೈಕೊಂಡಿಲ್ಲ. ಈ ದೃಷ್ಟಿಯಿಂದ ಮುಂದಿನ ಸಂಗ್ರಾಹಕರಿಗೆ ಪ್ರಪಂಚವು ಮೇಲ್ಪಂಕ್ತಿಯನ್ನು ಹಾಕಿ ಕೊಟ್ಟಿರುವದೆಂದು ಹೇಳಬಹುದು.

ಸಾಹಿತ್ಯವು ಜನಜೀವನದ ಪಡಿನೆಳಲೆಂದು ಸಾಮಾನ್ಯವಾಗಿ ಹೇಳುವ ವಾಡಿಕೆಯಿದೆ. ಇದನ್ನು ಪ್ರತ್ಯಕ್ಷೀಕರಿಸಬೇಕಾದರೆ 'ಮಧುವನ'ವನ್ನು ಓದಬೇಕು.

'ಕಾಮನ ಬಿಲ್ಲಿ'ಗಿಂತ 'ಮಧುವನ'ವು ಮೂರು ಸಂಗತಿಗಳಲ್ಲಿ ಮುಂದಡಿಯಿಟ್ಟಿದೆಯೆನ್ನಬಹುದು. ಮೊದಲನೇದಾಗಿ ಲೇಖಕರ ಭಾವಚಿತ್ರಗಳು ಕೊಡಲ್ಪಟ್ಟಿವೆ. ಎರಡನೇದಾಗಿ ಕತೆಗಾರರಂತೆ ಕತೆಗಾರ್ತಿಯರಿಗೂ ಎಡೆ ಕೊಡಲ್ಪಟ್ಟಿದೆ. ಮೂರನೆಯದಾಗಿ ಈ ಮೊದಲು ಪ್ರಕಟವಾಗದ ಕತೆಗಳು ಸೇರಿಸಲ್ಪಟ್ಟಿವೆ.......೨೫ ಭಾವಚಿತ್ರಗಳುಳ್ಳ ೨೫೬ ಪುಟಗಳ ಈ ಗ್ರಂಥಕ್ಕೆ ೧॥ ರೂ. ಬೆಲೆ ತೀರ ಕಡಿಮೆಯೆಂದೇ ಹೇಳಬೇಕು.

—'ಭಾರತಿ'ಯಲ್ಲಿ ಹನುಮಂತರಾವ್ ಮಾಂಜರೇಕರ, B. A.

'ಪುಸ್ತಕವನ್ನು ಇಷ್ಟೊಂದು ಸುಂದರವಾಗಿ ಪ್ರಕಟಿಸಿ ವಾಙ್ಮಯ ಸೇವಾಬದ್ಧರಾದುದಕ್ಕೆ ನಮ್ಮ ಹೃತ್ಪೂರ್ವಕ ವಂದನೆಗಳಿವೆ. ಈ ಕೃತಿಗೆ

ಪತ್ರ್ಯಪುಸ್ತಕ ಸಮಿತಿಯುವರ ಮುತ್ತು ಸಾರ್ವಜನಿಕರ ಬೆಂಬಲವು ದೊರೆತು ಮಧುವನದ ಮಧುವಿನ ಮಾಧುರ್ಯವೆಷ್ಟೆಂಬುದು ಪ್ರತಿಯೊಬ್ಬ ಕನ್ನಡಿಗನು ತಿಳಿಯುವಂತಾಗಲೆಂದು ಹಾರೈಸುತ್ತೇವೆ.' —ಬಡವರ ಬಂಧು.

'...ಆದರ್ಶ ರೀತಿಯಲ್ಲಿ ಪ್ರಕಟಿಸಲ್ಪಟ್ಟ ಕತೆಗಳ ಸಂಗ್ರಹವು ಇದೇ ಮೊದಲಿನದ್ದೆಂತ ಹೇಳಿವರೆ ಅತಿಶಯೋಕ್ತಿಯಾಗಲಾರದು.' —ಕಂಠೀರವ

'...ಸಂಪಾದಕರು ಕನ್ನಡ ಸಾಹಿತ್ಯಸೇವೆಯಲ್ಲಿ ಉತ್ಸಾಹಿಗಳು. ಇವರು ಪ್ರಕಟನಕಾರ್ಯದಲ್ಲಿ ವಿಶೇಷ ಶ್ರಮವಹಿಸಿದ್ದಾರೆ.

—ಪ್ರಬುದ್ಧ ಕರ್ನಾಟಕ.

**MADHUVANA**, Published by the Kiriyara Prapancha, Udipi. Price Rs. 1—8—0

De Lux Editin Rs: 2/-

Kiriyara Prapancha requires no introduction to the Kannada Public. In the world of letters, it has well-nigh become a national institution. The book under review is a collection of 25 stories by various authors (and authoresses) beautifully illustrated with the portraits of the writers. They describe with an intensity of feeling that can only be the result of the inward convictions of their writers, the blazing social and economic injustices that exist in present day Indian Society. The stories are simply told without any effort to produce effect! Kannada literature is decidedly the richer for this book.

FINANCIA EXPERTUS.

— ನುಡಿ ೭ —

## ಮುಂದಿನ ದೇವರು (ಪ್ರಬಂಧ) ಬೆಲೆ ೦—೨—೦

ಬರೆದವರು: ಶ್ರೀ. ಕೆ. ಕೆ. ಶೆಟ್ಟರು.

ಪುರಾತನ ಸಮಾಜದ ವ್ಯವಸ್ಥೆ ಹೇಗಿತ್ತು? ಇಂದಿನದು ಯಾವ ರೀತಿಯಲ್ಲಿದೆ? ಮುಂದೆ ಹೇಗಾಗಬೇಕು? ಎಂಬುದನ್ನು ವಿಚಾರಪೂರ್ಣವಾಗಿಯೂ ಸಂಕ್ಷೇಪವಾಗಿಯೂ ವಿವರಿಸುವ ಪ್ರಬಂಧ.

“ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಈಗ ವಿಸ್ಮಯಕರ ಮಾರ್ಪಾಟಗಳುಂಟಾಗುತ್ತಿರುವಾಗ ಇಂಥಾ ಹೊಸ ಹುರುಪಿನ ಹೊಸ ದೃಷ್ಟಿಯ ಹೊಸ ಪುಸ್ತಕಗಳು ಹೊರಬರುವುದು ಅತ್ಯಾವಶ್ಯಕ.

—‘ಕಂಠೀರವ’.

— ನುಡಿ ೮ —

## ವ್ಯಭಿಚಾರಿಣಿ ಯಾರು? (ನಾಟಕ) ಬೆಲೆ ೦—೮—೦

ಬರೆದವರು: ಶ್ರೀ. ಕೆ. ಕೆ. ಶೆಟ್ಟರು.

ಚಿತ್ರ ಮತ್ತು ಪದ್ಯಾವಳಿಯಿಂದೊಡಗೂಡಿದೆ.

ತಾರುಣ್ಯದುಬ್ಬಿನಿಂದಾದ ಒಂದು ಕ್ಷಣದ ಅವಿವೇಕವನ್ನೇ ಸಮಾಜವು ಪರ್ವತೀಕರಿಸಿ ಓರ್ವ ಸ್ತ್ರೀಯು ಎಷ್ಟೊಂದು ನಿರ್ದುಷ್ಟಳೂ, ನಿಷ್ಕಳಂಕಳೂ ಆದರೂ ಅವಳನ್ನು ಹೇಗೆ ಬಹಿಷ್ಕರಿಸಿ ದೂರೀಕರಿಸುತ್ತದೆ? ಮತ್ತು ಮಾನವಂತತನದ ಸೋಗಿನಿಂದ ನಡೆಸಲ್ಪಡುವ ಅನಾಚಾರವನ್ನು ಹೇಗೆ ಕಡೆಗಣಿಸುತ್ತದೆ? ಎಂಬುದನ್ನು ಹೃದಯಭೇದಕವಾಗಿ ಚಿತ್ರಿಸುವ ವಿಚಾರಕ್ರಾಂತಿಕಾರಕ ನಾಟಕವಿದು. ಪವಿತ್ರ ಪ್ರೇಮವು ಎಂತಹ ಅಪಮಾನ, ನಿಂದೆ, ಕಠಿಣ ಪರೀಕ್ಷೆಗೊಳಗಾದರೂ ಕಟ್ಟಕಡೆಗೆ ಅದರ ವಿಜಯವು ನಿಶ್ಚಯವೆಂಬುದನ್ನು ಮನಗಾಣಿಸುವ ನವೀನ ಸಾಮಾಜಿಕ ನಾಟಕ.

ಉಡುಪಿ, ಮಂಗಳೂರು, ಬೊಂಬಾಯಿ, ಕಾರವಾರ, ಗದಗ ಮೊದಲಾದ ಕಡೆಗಳಲ್ಲಿ ಜಯಶೀಲವಾಗಿ ಅಭಿನಯಿಸಲ್ಪಟ್ಟು ಜನಪ್ರಿಯವಾದ ನಾಟಕ.

— ನುಡಿ ೯ —

## ಹೆಂಡ್ತಿ ಗಂಡನಾದರೆ? (ನಾಟಕ) ಬೆಲೆ ೦—೪—೦

ಬರೆದವರು: ಶ್ರೀ. ಕೆ. ಕೆ. ಶೆಟ್ಟರು.

ಸಾಂಪತ್ತಿಕ ಸ್ವಾತಂತ್ರ್ಯವುಳ್ಳ ಗಂಡನೊಬ್ಬನು ಅವನನ್ನು ಅವಲಂಬಿಸಿರುವ ಹೆಂಡತಿಯನ್ನು ಯಾವ ರೀತಿಯಲ್ಲಿ ಕಾಣುತ್ತಾನೋ ಅದೇ ರೀತಿಯಲ್ಲಿ ಸಾಂಪತ್ತಿಕ ಸ್ವಾತಂತ್ರ್ಯವನ್ನು ಪಡೆದಿರುವ ಹೆಂಡತಿಯು ತನ್ನನ್ನು ಹೊಂದಿರುವ ಗಂಡನನ್ನು ಕಂಡಲ್ಲಿ ಹೇಗಾಗುವುದು ಎಂಬುದನ್ನು ಮನಗಾಣಿಸಿ ಸ್ತ್ರೀ ಸ್ವಾತಂತ್ರ್ಯವನ್ನು ಮಾರ್ಮಿಕವಾಗಿ ಪ್ರತಿಪಾದಿಸುವ ಬೋಧಪರವೂ ವಿಚಾರಪರವೂ ವಿನೋದಪರವೂ ಆದ ಪ್ರಹಸನ. ಸ್ಕೂಲ್‌ಡೇ, ಸಮಾಜಕೂಟಾದಿ ಸಂದರ್ಭಗಳಲ್ಲಿ ಅಭಿಯಿಸಲು ಯೋಗ್ಯವಾದ ಏಕಾಂಕ ನಾಟಕ.

'...ಶ್ರೀ. ಕೆ. ಕೆ. ಶೆಟ್ಟರು ಪ್ರೇಕ್ಷಕರನ್ನಾಗಲೀ, ವಾಚಕರನ್ನಾಗಲೀ ನಗುನಗಿಸಿ ವಿಚಾರದ ಸೆಳೆತಕ್ಕೆ ಮುಟ್ಟಿಸಿ ಬಿಡುವ ಈ ಸಾಮಾಜಿಕ ಪ್ರಹಸನವನ್ನು ಬರೆದು ಬರಹಗಾರರಿಗೊಂದು ದಾರಿ ತೋರಿರುವುದು ತುಂಬಾ ಸಂತೋಷ. ಈ ಪ್ರಹಸನದಲ್ಲೆಲ್ಲಾ ಘನಹಾಸ್ಯವು ಗುಪ್ತವಾಗಿಯೂ, ವ್ಯಕ್ತವಾಗಿಯೂ ಹರಿಯುತ್ತಲಿದ್ದೆ, ವಿಚಾರವು ಎರಕವಾಗಿದೆ. ಮಾತುಗಳು ಪಾತ್ರಸನ್ನಿವೇಶಗಳ ಭಾವಕ್ಕೆ ಸಹಜ ಹಾಗೂ ಸ್ವಾರಸ್ಯವೆನಿಸುವಂತಹವು. ಹಲವು ಸ್ವಾರಸ್ಯದ ಹಾಗೂ ಮಾರ್ಮಿಕ ಸನ್ನಿವೇಶಗಳಿಂದ ಪ್ರತಿಯೊಂದು ಪುಟವೂ ತುಂಬಿ ತುಳುಕುತ್ತಿರುವ ಈ ಪ್ರಹಸನದ ಸ್ವಾರಸ್ಯವನ್ನು ಓದಿಯೇ ತಿಳಿಯಬೇಕು, ಅಭಿನಯಿಸಿದರಂತೂ ನಕ್ಕು ನಕ್ಕು ಕಣ್ಣೀರು ಬರಬೇಕು ನೋಡಿದವರಿಗೆಲ್ಲ. ಬರೀ ಹುಚ್ಚಾಟದ ನಗುವಲ್ಲ, ನಕ್ಕಂತೆ ವಿಚಾರದ ತೆರೆ ಏಳುತ್ತದೆ.

S. R. Kordcal.

— ನುಡಿ ೧೦ —

## ಪುರುಷವಧು! (ಏಕಾಂಕ ಪ್ರಹಸನ) ಬೆಲೆ ೦—೪—೦

ಬರೆದವರು: ಶ್ರೀ. ಕೆ. ಕೆ. ಶೆಟ್ಟರು.

ಮುದುಕನ ಮದುವೆಯ ಭ್ರಾಂತಿಯನ್ನು ಉಚ್ಚಾಟನೆ ಮಾಡಲು ನವ

ಸುಧಾರಕ ತರುಣರು ಕೆಲವರು ಹೂಡುವ ಹಂಚಿಕೆಯನ್ನು ಚಿತ್ರಿಸುವ ಅತ್ಯಂತ ಮನೋರಂಜಕ ಪ್ರಹಸನ. ಸ್ಕೂಲ್‌ಡೇ, ಸಮಾಜಕೂಟ ಮೊದಲಾದ ಸಂದರ್ಭಗಳಲ್ಲಿ ಅಭಿನಯಿಸಲು ಅತ್ಯುಪಯುಕ್ತವಾಗಿದೆ:

'...ಪ್ರಹಸನಕ್ಕೆ ಬೇಕಷ್ಟು ನಗುವೆಬ್ಬಿಸುವ ಸ್ವಾರಸ್ಯದ ಮಾತುಗಳು ಆದ್ಯಂತದ ವರೆಗೂ ನಡುನಡುವೆ ಬರುತ್ತಿರುವುದರಿಂದ ವಾಚಕರಾಗಲೀ ಪ್ರೇಕ್ಷಕರಾಗಲೀ ಬಿಟ್ಟೇಳಲಾರರು.........ಹೇಳುವ ರೀತಿಯಲ್ಲಿ, ದೃಶ್ಯ ಸೃಷ್ಟಿಸುವಲ್ಲಿ ಸಹಜವೂ, ಸ್ವಾರಸ್ಯವೂ, ಚಮತ್ಕಾರವೂ ಇವೆ...ಸಂತೋಷದ ಕೂಟಗಳಲ್ಲಿ ಅಭಿನಯಿಸಿದರೆ ಆನಂದಾತಿರೇಕ ಹೊಂದುವುದರಲ್ಲಿ ಸಂದೇಹವಿಲ್ಲ'.

—ಕೊ. ಶ್ರೀ. ರಾ.

— ನುಡಿ ೧೧ —

## ಸನ್ಯಾಸಿಯ ಸೋಗಿನಲ್ಲಿ ಬೆಲೆ ೦—೮—೦

ಬರೆದವರು: ಶ್ರೀ. ಕೆ. ಕೆ. ಶೆಟ್ಟರು.

ವೇಶ್ಯಾಪುತ್ರಿಯಾದರೂ ನೀತಿವಂತ ಜೀವನ ನಡೆಸುವ ಮನಸ್ಸುಳ್ಳವಳಾದರೆ ಸಮಾಜವು ಅದಕ್ಕೆ ಹೇಗೆ ಅಡ್ಡಿಮಾಡಿ ಅವಳ ಜೀವನವನ್ನು ಕೆಡಿಸಲು ಕಾರಣವಾಗುವುದೆಂಬುದನ್ನು ಹೃದ್ಯಾವಕವಾಗಿ ಚಿತ್ರಿಸಿರುವ ನವೀನ ಸಾಮಾಜಿಕ ಕಾದಂಬರಿಯಿದು.

ಯಾವನು ಧರ್ಮಾಧಿಕಾರಿಯಾಗಿ, ಸರ್ವಬಿಟ್ಟ ಸನ್ಯಾಸಿಯಾಗಿ ಸಮಾಜದ ನೀತಿನಿಯಮ ಪಾಲನಾಕರ್ತನಿರುವನೋ ಅವನೇ ಅತ್ಯಾಚಾರಿಯಾಗಿ, ತನ್ನ ಅಧಿಕಾರ ಬಲದಿಂದ ನಿರ್ದೋಷಿ ಅಬಲೆಯೊಬ್ಬಳ ಜೀವನ ಸುಖವನ್ನೇ ಮಣ್ಣುಗೂಡಿಸುವ ಚಿತ್ರವನ್ನು ಕಣ್ಣ ಮುಂದಿರಿಸಿ ಹೃದಯವನ್ನು ಕರಗಿಸಿ ಕಂಬನಿ ತುಂಬಿಸುವ ವಿಷಾದಾಂತ ಕಾದಂಬರಿ. ಈಗಿನ ಸನ್ಯಾಸಿಗಳ ಅಂತರಂಗವನ್ನು ತಿಳಿಯಬೇಕಾದರೆ ಈ ಪುಸ್ತಕದ ಅಂತರಂಗವನ್ನೇ ನೋಡಬೇಕು. ಒಳಗಿನ ಗುಟ್ಟನ್ನು ತಿಳಿಯಬೇಕಾದರೆ ಈ ಪುಸ್ತಕವನ್ನೇ ಹೊಕ್ಕು ನೋಡಬೇಕು.

— ನುಡಿ ೧೨ —

## ನಂದಾದೀಪ (ಕಥಾ ಸಂಗ್ರಹ) ಬೆಲೆ ೦—೮—೦

**ಬರೆದವರು: ಶ್ರೀ. ಕೊರಡ್ಕಲ್ ಶ್ರೀನಿವಾಸರಾಯರು.**

ಸಣ್ಣ ಕಥೆಗಳನ್ನು ಬರೆಯುವದರಲ್ಲಿ ಹೆಸರ್ಗೊಂಡ ಶ್ರೀ| ಕೊರಡ್ಕಲ' ಶ್ರೀನಿವಾಸರಾಯರು ತಮ್ಮ ಉತ್ತಮ ಕಥೆಗಳನ್ನು ಪೋಣಿಸಿಕೊಟ್ಟ 'ನಂದಾದೀಪ'ವೆಂಬ ಈ ಪುಸ್ತಕವು ಉಡುಪಿ 'ಕಿರಿಯರ ಪ್ರಪಂಚ'ದಿಂದ ಹೊರಬಿದ್ದಿದೆ. ಸ್ಥಳೀಕ ವಾತಾವರಣದ ಮೇಲಿಂದ ಬರೆಯಲ್ಪಟ್ಟ ಈ ಕಥೆಗಳಂತೂ ಬೋಧಪ್ರದವಾಗಿದ್ದು ಓದುಗರ ಮನಸ್ಸನ್ನು ಮಾಪಾರ್ಟ ಮಾಡುವಂತಿವೆ. ಶ್ರೀ| ರಾಯರು ಇದೇ ರೀತಿ ಉಪಯುಕ್ತವಾದ ಸಾಹಿತ್ಯದಿಂದ ಕನ್ನಡಿಗರನ್ನು ತೃಪ್ತಿಗೊಳಿಸಲೆಂದು ನಮ್ಮ ಹಾರೈಕೆ. —ಸಂಯುಕ್ತ ಕರ್ನಾಟಕ.

ಕಥಾಸಂಗ್ರಹ ರೂಪದಲ್ಲಿ ಶ್ರೀ| ಕೊರಡ್ಕಲ್ ಶ್ರೀನಿವಾಸರಾಯರ ಕಥೆಗಳು ಕನ್ನಡ ತಾಯ ಮಡಿಲಿಗೆ ಒಡಲ ಕಾಣಿಕೆಯಾಗಿ ಅರ್ಪಿತವಾದುದು ಇದೇ ಮೊದಲು. ಈ ನಂದಾದೀಪವು ಹನ್ನೊಂದು ಕಥಾ ಬತ್ತಿಗಳನ್ನೊಳಗೊಂಡು ಉರಿಯತೊಡಗಿದೆ. 'ನಂದಾದೀಪ'ದಲ್ಲಿನ ಕಥೆಗಳೆಲ್ಲವೂ ಸಾಮಾಜಿಕ ವಿಚಾರಗಳನ್ನೊಳಗೊಂಡಿವೆ. ದಿನನಿತ್ಯ ನಾವು ಸಮಾಜದಲ್ಲಿ ಕಾಣುತ್ತಿರುವ ಚಿತ್ರಗಳನ್ನೇ ರಾಯರು ಕಥಾರೂಪದಲ್ಲಿ ಚಿತ್ರಿಸಿದ್ದಾರೆ. ರಾಯರ ಕಥೆಗಳನ್ನೋದುವಾಗ ತೂಕಡಿಕೆ ಕಮ್ಮಿ. ಕಾರಣ ಕಥೆಗಳಲ್ಲಿ ಅಲ್ಲಲ್ಲಿ ಹಾಸ್ಯವೂ, ಪರಟೆಯೂ ಸುಳಿದಾಡುತ್ತಿರುವುದರಿಂದ ಸರಳವಾದ ಶೈಲಿಯಲ್ಲಿ ಸರಸವಾಗಿ ಬರೆದ ಕಥೆಗಳು ನೀರಸವಾಗಿರದೆ, ವಾಚನಕ್ಕೆ ಯೋಗ್ಯವಿವೆ. ವಿರಾಮ ಕಾಲಗಳಲ್ಲಿ ಬೇಸರ ಕಳೆಯಲು ಇಂಥಾ ಪುಸ್ತಕಗಳು ಕೈಯಲ್ಲಿರುವುದರಿಂದ ಹೆಚ್ಚಿನ ಪ್ರಯೋಜನ ಬೀಳಬಹುದು. ಪುಸ್ತಕದಲ್ಲಿ ರಾಯರ ಭಾವಚಿತ್ರವೂ ಇದೆ. ಗ್ರಂಥದ ಮುಖಚಿತ್ರವು ಪುಸ್ತಕದ ಸೊಗಸನ್ನು ಹೆಚ್ಚಿಸಿದೆ ಎನ್ನಬಹುದು. ಕಥಾರೂಪದಲ್ಲಿರುವ 'ನಂದಾದೀಪ'ವೇ ಚಿತ್ರರೂಪದಲ್ಲಿ ಗರ್ಭಗುಡಿಯಲ್ಲಿ ಉರಿಯುತ್ತಿದೆ: ದೀಪದ ಬೆಳಕನ್ನು ಮಂದಿರದ ಆಚಾರ್ಯರೊಬ್ಬರು ಸ್ಥಿರ ದೃಷ್ಟಿಯಿಂದ ಕುಳಿತು ಯಾವುದೇ ಒಂದು ದಪ್ಪದ ಗ್ರಂಥವನ್ನು ಬಳಿಯಲ್ಲಿ ರಿಸಿಕೊಂಡು ಸಾರ್ಥಕಗೊಳಿಸುತ್ತಿದ್ದಾರೆ ಎಂದರೆ ತಪ್ಪಾಗದು. ಅಂತೆಯೇ

ಕನ್ನಡಪ್ರೇಮಿಗಳೆಲ್ಲರೂ ಉದಾರ ಮನಸ್ಸಿನಿಂದ ನಂದಾದೀಪದ ಬೆಳಕಿನ ಪ್ರಯೋಜನವನ್ನು ಪಡೆಯಬೇಕೆಂದೂ ನನ್ನ ಹಾರೈಕೆ.

—ಕೆ. ಆರ್. ಕೆ. (ಸ್ವತಂತ್ರಭಾರತ.)

ಕನ್ನಡನಾಡು ಕನ್ನಡ ನುಡಿಗಳ ಮೇಲ್ಮೆಗಾಗಿ ದುಡಿಯುವವರಲ್ಲಿ ಶ್ರೀ। ಕೊರಡ್ಕಲ್ ಶ್ರೀನಿವಾಸರಾಯರೂ ಒಬ್ಬರು; ಇದರಿಂದಾಗಿ ಕನ್ನಡಿಗರಿಗೆ ಚಿರಪರಿಚಿತರಾಗಿದ್ದಾರೆ. ಹೆಸರಾಂತ ಸಾಹಿತಿಗಳು, ಸಣ್ಣ ಕತೆಗಳನ್ನು ಬರೆಯುವುದರಲ್ಲಿ ನುರಿತವರು, ಸಣ್ಣ ಕತೆಗಳ ಈ ಗುಡಿಯಲ್ಲಿ ಅವರು ಹನ್ನೊಂದು ನಂದಾದೀಪಗಳನ್ನು ಉರಿಸಿದ್ದಾರೆ......'ದೊಡ್ಡವರ ವಜ್ರ'ದ ಕಥಾವಸ್ತುವು ಅನೇಕ ಬರೆಹಗಾರರ ಲೆಕ್ಕಣಿಯಿಂದ ಬೇರೆಬೇರೆ ರೀತಿಯಾಗಿ ಚಿತ್ರಿಸಲ್ಪಟ್ಟಿದೆ. ಕೆಲವರು ಜಯಶೀಲರೂ ಆಗಿದ್ದಾರೆ. ಅಂತಹರಲ್ಲಿ ಈ ಲೇಖಕರೂ ಒಬ್ಬರು. ಉತ್ತಮವಾದ ಕಾದಂಬರಿಯನ್ನು ಬರೆವ ಶಕ್ತಿಯೂ ತನಗುಂಟೆಂಬುದನ್ನು ಈ ಕತೆಯಲ್ಲಿ ಲೇಖಕರು ಎತ್ತಿ ತೋರಿಸಿದ್ದಾರೆ. ಜೀವವಿಮೆಯಿಳಿಸುವುದರಿಂದ ಪ್ರಯೋಜನವುಂಟೆಂಬುದನ್ನು ತೋರಿಸಿ ಕೊಡಲು "ಆಪತ್ತಿನಲ್ಲಿಯೂ ಸಂಪತ್ತು"ನ್ನು ತಂದಿದ್ದಾರೆ. ಈಗಿನ ಪದವೀಧರ 'ತರುಣರು ವಿದ್ಯಾವಂತರೆಂಬ ಹೆಮ್ಮೆಯಿಂದ ಸ್ವಾವಲಂಬನಶೂನ್ಯರಾಗಿ ಹೇಗೆ ನಿರಾಶರಾಗುತ್ತಾರೆಂಬುದನ್ನು 'ಆನಂದನ ಬಿ. ಎ. ಡಿಗ್ರಿ'ಯಿಂದ ಮುಂದಟ್ಟು ಮಾಡಿದ್ದಾರೆ. 'ಮನೆಯಲ್ಲಿ ಭೂತ ಸಂಚಾರವಾಗುವಾಗ, ಸಾಲ ಕೊಟ್ಟವರ ರಾಕ್ಷಸೀ ಮಹತ್ವಾಕಾಂಕ್ಷೆಯ ಸಂಚಾರವೂ ನಮ್ಮ ಹೃದಯದಲ್ಲಾಗುವಂತೆ ಮಾಡಿದ್ದಾರೆ. 'ಅಜ್ಜಯ್ಯನ ಮದುವೆ'ಯೊಳಗೆ ಊದಿರುವ ಚಮತ್ಕಾರದ ಸ್ವಾರಸ್ಯ ಚೆನ್ನಾಗಿದೆ. ವಿನೋದದ ಮುಗುಳ್ನಗೆಯನ್ನು ಅಲ್ಲಿ ವಿಶದವಾಗಿ ಕಾಣಬಹುದು. 'ಧನಿಯರ ಸತ್ಯನಾರಾಯಣ'ನಿಂದ ಈ ನಂದಾದೀಪಕ್ಕೊಂದು ಮಿರುಗನ್ನು ಕೊಟ್ಟು ಎಲ್ಲೆಡೆಯಲ್ಲೂ ಬೆಳಕು ಬೀರುವಂತೆ ಮಾಡಿದ್ದಾರೆ. ಅಂತೂ ಸಂಗ್ರಹವು ಉದಾತ್ತ ವಿಚಾರಗಳಿಂದ ಕೂಡಿದ್ದು ಓದಲು ತಕ್ಕುದಾಗಿದೆ. ಕನ್ನಡಿಗರೆಲ್ಲರೂ ಈ ನಂದಾದೀಪಕ್ಕೆ ಸಹಾನುಭೂತಿಯ ಎಣ್ಣೆಯೆರೆದು ತಮ್ಮಲ್ಲಿ ಅದರ ಪ್ರಕಾಶ ಬೀರುವಂತೆ ಮಾಡಿಕೊಂಡು ಈ ಗ್ರಂಥಕರ್ತರಿಂದ ಇದಕ್ಕಿಂತಲೂ ಮಿಗಿಲಾದ ಜ್ಯೋತಿಯನ್ನು ಪಡೆಯುವರಾಗಿ ನಂಬುತ್ತೇವೆ.

—ರಾಷ್ಟ್ರಬಂಧು.

...ಗ್ರಂಥಮಾಲೆಯು 'ತೊದಲ್ನುಡಿ' ನಾಮಾಂಕಿತವಾದರೂ ಈ ಕತೆಗಳೇನೂ ತೊದಲುನುಡಿಗಳಲ್ಲವೆಂದು ಧಾರಾಳವಾಗಿ ಹೇಳಬಹುದು. ಶ್ರೀ ಶ್ರೀನಿವಾಸರಾಯರ ಕತೆಗಾರಿಕೆಯಲ್ಲಿ ಕಲಾಪೂರ್ಣತೆಯಿದೆ. ಲೇಖನದ ಶೈಲಿಯಲ್ಲಿ ಇಂಪು, ಮೆಲ್ಪು, ಮೈಗೂಡಿದೆ. ಕತೆಯನ್ನು ಓದಲು ಮೊದಲು ಮಾಡಿದರೆ, ಕೊನೆ ಮುಟ್ಟಿಸುವ ಆಕರ್ಷತೆಯಿದೆ. ಇವರ ಕತೆಗಳಲ್ಲಿ ಸ್ವಾಭಾವಿಕವಾಗಿಯೇ ಇರುವ ಸ್ವಜತೆಗೆ, ಬೂದ, ತುಕ್ರಿ, ತೌಡ ಇತ್ಯಾದಿ ಇದ್ದ ಹೆಸರುಗಳಿಂದ ಮತ್ತಷ್ಟು ಕಳೆಯೇರಿದೆ. ಅಂತೂ ಹೆಚ್ಚಿನ ಕತೆಗಳೂ ಜನಜೀವನದ ಪಡಿನೆಳಲಂತಿವೆಯೆನ್ನುವುದಕ್ಕೇನೂ ಅಡ್ಡಿಯಿಲ್ಲ. ಇವರಿಂದ ಇನ್ನೂ ನಾವು ಉತ್ತಮ ಕತೆಗಳನ್ನು ನಿರೀಕ್ಷಿಸಬಹುದು. ಈ ಕಥಾಸಂಗ್ರಹವು ಸಂಗ್ರಹಣೀಯವಿದೆಯೆನ್ನುವುದು ನಿಸ್ಸಂದೇಹ. ಲೇಖಕರೆಂದಂತೆ 'ಶಾರದೆಯ ಭಜಕರು ತಾವು ಅರ್ಪಿಸುವ ಹರಕೆಯ ಎಣ್ಣೆ ತುಪ್ಪಗಳಲ್ಲಿ ಒಂದಿಷ್ಟನ್ನು ಈ ದೀಪಮಾಲೆಗೂ ಎರೆಯುತ್ತಲಿರಬೇಕು' ಎಂದು ನಾವೂ ಹೇಳಬಯಸುವೆವು.

—ಪ್ರಭಾತ.

— ನುಡಿ ೧೩ —

## ದೇಶ ಭಕ್ತ (ರಾಜಕೀಯ ನಾಟಕ) ಬೆಲೆ ೦—೧೦—೦

### ಬರೆದವರು: ಶ್ರೀ. ಕೆ. ಕೆ. ಶೆಟ್ಟರು.

(ಶ್ರೀ. ರಂಗನಾಥ ದಿವಾಕರರ ಮುನ್ನುಡಿಯೊಡನೆ)

ಇದೊಂದು ಸಾಮಾಜಿಕ ನಾಟಕ. ಸಮಾಜದಲ್ಲಿ ನಡೆಯುತ್ತಿರುವ ವಿಷಯಗಳನ್ನೆತ್ತಿಕೊಂಡು ಜನರಿಗೆ ಮುಂದಟ್ಟಾಗುವಂತೆ ಸುಲಭವಾದ ಶೈಲಿಯಲ್ಲಿ ಬೋಧಪ್ರದವಾದ ಈ ನಾಟಕವನ್ನು ಶ್ರೀ ಶೆಟ್ಟರು ಬರೆದಿದ್ದಾರೆ. "ದೇಶಭಕ್ತ"ನು ಹೇಗಿರಬೇಕು? ಅವನ ಧ್ಯೇಯ ಧೋರಣೆಗಳು ಹೇಗೆ ಆದರ್ಶವಾಗಿರಬೇಕು? ಜನತಾ ಜನಾರ್ದನ ಸೇವೆ ಎಂದರೇನು ಎಂಬುದೇ ಈ ನಾಟಕದ ಮುಖ್ಯ ಗುರಿಯಾಗಿದೆ. ಅವನ್ನು ಕೌಶಲ್ಯದಿಂದ ಚಿತ್ರಿಸಿ ಸಂಸ್ಥಾನದಲ್ಲಿ ನರೇಂದ್ರರು ಮಾಡುತ್ತಿರುವ ದಬ್ಬಾಳಿಕೆಯ ಭೀಕರ ಚಿತ್ರವನ್ನು ಮುಂದಿಟ್ಟು ಸಾಗಿಸಿದರೆ ಪ್ರಜಾಸ್ವಾತಂತ್ರ್ಯವು ಎಲ್ಲೆಲ್ಲಿಯೂ ಸಾಧ್ಯವಿದೆಯೆಂಬುದನ್ನು ಶ್ರೀ

ಶೆಟ್ಟರು ಸಾಕಷ್ಟು ಸ್ಪಷ್ಟಮಾಡಿದ್ದಾರೆ. ಕಥಾನಾಯಕನಾದ ದೀನೇಂದ್ರನ ಧೀರೋದಾತ್ತ ವಿಚಾರಗಳು ಹಾಗು ಪ್ರಯತ್ನವು ಓದುಗರ ಮನಸ್ಸಿಗೆ ನಾಟು ವಂತಿದೆ. ಮುಂದಾದರೂ ಇಂಥ ಪುಸ್ತಕಗಳನ್ನು ಶ್ರೀ ಶೆಟ್ಟರು ಬರೆದು ವಾಙ್ಮಯ ಸೇವೆ ಮಾಡಲೆಂದು ನಮ್ಮ ಹಾರೈಕೆ.

ಸಂಯುಕ್ತ ಕರ್ನಾಟಕ.

ಈ ನಾಟಕದಲ್ಲಿ ಇಂದು ನಮ್ಮ ನಾಡಿನ ದೇಶಿಯ ಸಂಸ್ಥಾನಗಳ ಪ್ರಜೆಗಳು ಜವಾಬ್ದಾರಿ ಸರಕಾರ ಸ್ಥಾಪನೆಗಾಗಿ, ನಿರಂಕುಶ ಸತ್ತೆಯ ದಬ್ಬಾಳಿಕೆಯ ನಿವಾರಣೆಗಾಗಿ ನಡಿಸುತ್ತಿರುವ ಚಳವಳಿಗಳನ್ನೇ ವಸ್ತುವನ್ನಾಗಿ ನಾಟಕಕಾರರು ಆರಿಸಿಕೊಂಡಿದ್ದಾರೆ. ಇಂಥ ಸಮಯದಲ್ಲಿ ಈ ನಾಟಕವು ಪುನರ್ಮುದ್ರಿತವಾಗಿ ಹೊರಬಿದ್ದುದು ಸಂತೋಷಕರವಾದುದೆನ್ನಲಡ್ಡಿಯಿಲ್ಲ. ಸರಳವಾದ ಭಾಷೆಯಿಂದ, ಸರಸವಾದ ಸಂಭಾಷಣೆಗಳಿಂದ ನಾಟಕ ಬಹು ಸ್ವಾರಸ್ಯವಾಗಿದೆ. ಕನ್ನಡನಾಡು ಮೈಸೂರು, ಹೈದರಾಬಾದು, ಜಮಖಂಡಿ, ರಾಮದುರ್ಗ, ಸಾಂಗಲಿ ಮುಂತಾದ ಸಂಸ್ಥಾನಗಳಲ್ಲಿ ಹರಿದು ಹಂಚಿ ಹೋಗಿದೆ. ಈ ಸಂಸ್ಥಾನದಲ್ಲೆಲ್ಲ ಜವಾಬ್ದಾರಿ ಸರಕಾರ ಸ್ಥಾಪನೆಗಾಗಿ ಪ್ರಜೆಗಳು ಎಚ್ಚತ್ತು ಸಡಗರದಿಂದ ಒಂದುಗೂಡಿ ಚಳವಳಿ ನಡೆಸಲು ಸಿದ್ಧರಾಗಿದ್ದಾರೆ. ಕೆಲವು ಕಡೆ ಚಳವಳಿಗಳು ನಡೆದವು. ರಾಜಿಗಳಾದುವು. ಗುರಿಯನ್ನು ಇನ್ನೂ ಮುಟ್ಟಿಲ್ಲ. ಇಂಥ ಪುಸ್ತಕಗಳು ಜನರಲ್ಲಿ ಜಾಗೃತಿಯನ್ನು ಕೆರಳಿಸುವಂಥವು. ಆದ್ದರಿಂದ ಇಂಥ ಗ್ರಂಥಗಳ ಜವಾಬ್ದಾರಿಯು ಬಹಳ ಗುರುತರವಾದುದು. ಬ್ರಿಟಿಷ್ ಭಾರತದಲ್ಲಿ ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಸತ್ಯ, ಅಹಿಂಸೆಗಳ ಬುನಾದಿಯ ಮೇಲೆ ನಡೆದ ಚಳವಳಿಯು ಸಂಸ್ಥಾನ ಪ್ರಜೆಗಳಿಗೆ ಮೇಲ್ಪಂಕ್ತಿಯಾಗಬೇಕು. ಇಂಥ ಗ್ರಂಥಗಳಲ್ಲಿ ಬ್ರಿಟಿಷ್ ಭಾರತದ ಸಂಗ್ರಾಮದ ಇತಿಹಾಸದ ಅನುಭವವೂ ಅದರ ಪರಿಣಾಮವೂ ಚೆನ್ನಾಗಿ ಚಿತ್ರಿಸಲ್ಪಟ್ಟಿದ್ದರೆ ಸಂಸ್ಥಾನ ಪ್ರಜೆಗಳಲ್ಲಿ ನವೋದಯವಾಗಲು ಸುಲಭವಾಗುತ್ತದೆ. ಈ ದೃಷ್ಟಿಯಿಂದ ಗ್ರಂಥ ಬಹುಮಟ್ಟಿಗೆ ಯಶಸ್ವಿಯಾಗಿ ಬರೆಯಲ್ಪಟ್ಟಿದೆಯನ್ನಲಡ್ಡಿಯಿಲ್ಲ. ಕನ್ನಡಿಗರು ಈ ಗ್ರಂಥಕ್ಕೆ ಪ್ರೋತ್ಸಾಹ ಕೊಡುವರೆಂದು ನಂಬಿದ್ದೇವೆ.

ಚೌ. ಪ್ರಜಾಮತ.

ಶ್ರೀ| ದಿವಾಕರರು ಮುನ್ನುಡಿಯಲ್ಲಿ ಹೇಳಿದಂತೆ, ನಮ್ಮ ಪ್ರಸ್ತುತ

ರಾಜಕೀಯ ಸ್ವಾತಂತ್ರ್ಯ ಸಂಪಾದನೆಯ ಹೋರಾಟದ ವಿಷಯವಾಗಿ ಸಾಕಷ್ಟು ಸಾಹಿತ್ಯವಿರಚನೆಯಾಗಿಲ್ಲವೆಂಬುದು ಸುಸ್ಪಷ್ಟ. ಈ ನಾಟಕವು ಆ ಮಾದರಿಯದು. ಲೇಖಕರ ಮನೋಭಾವ-ದೊಲವು ಸಮಾಜ ಸಮತಾವಾದದ ಕಡೆಗೆ ಎಂದು ಅಲ್ಲಲ್ಲಿ ಮೇಲೆದ್ದು ಮೆರೆಯುತ್ತಿದೆ. ಎಂತೂ ಕಾಲಕ್ಕೆ ತಕ್ಕ ಪುಸ್ತಕವಿದು. ವಿಚಾರ ಪ್ರಬೋಧಕವಿದೆ. ಓದಲು ಯೋಗ್ಯವಿದೆ. ತಾತ್ಕಾಲಿಕ ಮನೋರಂಜನೆಯೊಂದೇ ಈ ಪುಸ್ತಕದ ಉದ್ದೇಶವಲ್ಲ. ಸಂತತ ಮನನಾರ್ಹವಿದು. ಹಿಂದುಸ್ಥಾನದ ಪ್ರಕೃತದ ನವಜಾಗೃತಿಗೆ ಎಲ್ಲಾ ದೇಶಭಾಷೆಗಳಲ್ಲಿಯೂ ಇಂತಹ ಪುಸ್ತಕಗಳ ಪರಮಾವಶ್ಯಕತೆಯಿದೆ. ಅದರಲ್ಲಿಯೂ ಕನ್ನಡದಲ್ಲಿ ಇಂತಹವು ಇನ್ನಷ್ಟು ಹೆಚ್ಚಾಗಬೇಕಾಗಿವೆ......ಕಿರಿಯರ ಪ್ರಪಂಚದವರ, ಹೆಚ್ಚಾಗಿ ಗ್ರಂಥಮಾಲೆಯ ಸಂಪಾದಕರಾದ ಕೆ. ಹೊನ್ನಯ್ಯ ಶೆಟ್ಟಿಯವರ ಸಾಹಸವು ಅಭಿನಂದನೀಯ. ಮಾಲೆಯಲ್ಲಿ ಇನ್ನಷ್ಟು ಸಾಹಿತ್ಯಕುಸುಮಗಳು ಅರಳಿ, ವಾಙ್ಮಯೋದ್ಯಾನವು ಗಮಗಮಿಸಿ ಪರಿಮಳಿತವಾಗಲಿ, ಎಂದೇ ನಮ್ಮ ಹಾರಾಸೆ!

—"ಶಂ" ಅನ್ನೆಂಬಳ (ಪ್ರಭಾತ.)

ತ್ರಿವಿಕ್ರಮಸಿಂಹನೆಂಬ ಲಕ್ಷ್ಮೀಪುರದ ಸಂಸ್ಥಾನದ ರಾಜನು ಭೋಗವಿಲಾಸ ಮಗ್ನನಾಗಿ ಪಾಶ್ಚಾತ್ಯ ದೇಶಗಳಲ್ಲಿ ಅಲೆಯುತ್ತಿದ್ದು ರಾಜಸೂತ್ರವನ್ನು ಸದಾಶಿವ ಪ್ರಸಾದನೆಂಬ ಕುತಂತ್ರಿಯಾದ ದಿವಾನನ ವಶವೊಪ್ಪಿಸಿರಲು ಆತನು ತನ್ನ ಸರ್ವಾಧಿಕಾರವನ್ನು ನಡೆಸುತ್ತಿರಲು ದಿವಾನನ ಮಿತ್ರನಾದ ಸರ್ ಸುರೇಂದ್ರನಾಥನ ಪುತ್ರ ದೀನೇಂದ್ರನು ಬಾರ್-ಎಟ್‌ಲಾ ಆಗಿ ಬಂದವನು ಸಂಸ್ಥಾನದ ದುಃಸ್ಥಿತಿಗೆ ಮರುಗಿ, ಉಚ್ಚ ಪದವಿಗೆ ತಿಲಾಂಜಲಿಯಿತ್ತು ಜನರಲ್ಲಿ ಸ್ವಾತಂತ್ರ್ಯಪ್ರೇಮವನ್ನು ಹುರಿದುಂಬಿಸಿ ಸತ್ಯಾಗ್ರಹ ಸಮರವನ್ನು ಹೂಡುವನು. ಆತನೇ ಕಥಾನಾಯಕ "ದೇಶಭಕ್ತ"ನು. ಉದ್ರೇಕಗೊಂಡ ದಿವಾನನ ಬಂಧನ, ಗುಂಡಿಟ್ಟು ಕೊಲ್ಲುವಿಕೆ ಮೊದಲಾದ ಅಮಾನುಷ ಅತ್ಯಾಚಾರಗಳನ್ನು ಮಾಡಿದರೂ ಜನರು ಶಾಂತರೀತಿಯಿಂದ ಚಳವಳವನ್ನು ಮುಂದೊತ್ತುವರು. ಕಡೆಗೆ ರೆಸಿಡೆಂಟ್ ಸರ್ ಪಿಯರ್ಸನ್‌ರವರ ಮಧ್ಯವರ್ತಿತ್ವದಿಂದ ಪ್ರಜೆಗಳ ಪಾಲಿಗೆ ಸ್ವಾತಂತ್ರ್ಯವು ಸಿಗುವುದು. ಸ್ವಾತಂತ್ರ್ಯಘೋಷಣೆಯು ಈ ನಾಟಕದಲ್ಲಿ ದಿವಾನದ ಪುತ್ರಿ ರಜನಿಯ ಪ್ರೇಮಪ್ರಸಂಗವು ಅಂತರ್ಗತ ಕಥೆಯಾಗಿ ಹೆಣೆಯಲ್ಪಟ್ಟಿದೆ.

ಕನ್ನಡದಲ್ಲಿ ರಾಷ್ಟ್ರೀಯ ಸಾಹಿತ್ಯವು ಏನೇನೂ ಹುಟ್ಟಿಲ್ಲ. ಕವಿಗಳು ಕೆಲವರು ಆ ಕೆಲಸವನ್ನು ಕೈಗೊಂಡಿದ್ದಾರೆ. ಆದರೆ ಗದ್ಯ ಸಾಹಿತ್ಯದಿಂದ, ಕಥೆ, ನಾಟಕಗಳಿಂದ ಜನತೆಯಲ್ಲಿ ತೀವ್ರ ಪ್ರಚೋದಕ ಪರಿಣಾಮವನ್ನು ಹುಟ್ಟಿಸಲು ಯತ್ನಿಸಿದವರು ತೀರಾ ವಿರಳ. ಈ ಕಾರ್ಯದಲ್ಲಿ ಶ್ರೀಮಾನ್ ಶೆಟ್ಟರ ಕೃತಿಯು ಮೊದಲನೆಯದು ಮತ್ತು ಮಾದರಿಯಾದುದು. ನಾಟಕದ ಸಮಸ್ತತೆಯಲ್ಲಿ ಎಲ್ಲೆಡೆಗಳಲ್ಲೊಂಬಂತೆ ಗಂಡು ನುಡಿಗಳು, ವೀರವಾಕ್ಯಗಳು ಆವೇಶವನ್ನು ತುಳುಕಿ ತುಂಬಿಸುವ ಸನ್ನಿವೇಶಗಳೇ ಕೂಡಿದ್ದು ಸ್ಫೂರ್ತಿಯ ಪ್ರವಾಹವೇ ತುಂಬಿ ಹರಿಯುವಂತಿದೆ. ನಿನ್ನಿನ ಮೈಸೂರಿನ ಮಾರಣ ಕೃತ್ಯ, ಇಂದಿನ ತಿರುವಾಂಕೂರಿನ ಪ್ರಳಯ ಕಾಂಡಗಳನ್ನು ಪ್ರತ್ಯಕ್ಷ ಕಾಣುವ ಹಿಂದೀಯನಲ್ಲಿ ಈ ನಾಟಕದ ಕಥೆಯು ದೇಶಾಭಿಮಾನವನ್ನು ಪ್ರೇರೇಪಿಸದಿರದು. ಉಡುಪಿಯ ಕಿರಿಯರ ಪ್ರಪಂಚದವರು ಸಾಹಿತ್ಯದೇವಿಯ ಸಮಾರಾಧನೆಯನ್ನೇ ಮಾಡುತ್ತಿದ್ದಾರೆ. ಈ ತೆರನ ನವನವೀನ ಗ್ರಂಥಗಳ ಪ್ರಕಾಶನ ಸಾಹಸಕ್ಕಾಗಿ, ಅವರ ಸಾಹಿತ್ಯ ಪ್ರೇಮವನ್ನು ಕನ್ನಡಿಗರು ಕೊಂಡಾಡಬೇಕು.

ಕಯ್ಯಾರ. (ಸ್ವತಂತ್ರಭಾರತ)

— ನುಡಿ ೧೪ —

## ಪ್ರೇಮವಿಜಯ (ನಾಟಕ) ಬೆಲೆ ೦—೧೨—೦

ಬರೆದವರು: **ಶ್ರೀ. ಕೆ. ಕೆ. ಶೆಟ್ಟರು.**

ಹಿಂದು ಸಮಾಜದ ಕ್ರಾಂತಿಕಾರಕ, ಹೃದ್ರಾವಕ, ವಿಚಾರ ಪ್ರಚೋದಕ ನಾಟಕ.

— ನುಡಿ ೧೫ —

## ರಂಗಭೂಮಿ (ನಾಟಕ) ಬೆಲೆ ೦—೮—೦

ಬರೆದವರು: **ಶ್ರೀ. ಎಸ್. ವೆಂಕಟರಾಯರು**

ವಿಚಾರ ಮತ್ತು ವಿನೋದಮಯ ನಾಟಕ.

# ನಮ್ಮಲ್ಲಿ ಸಿಗುವ ಇತರ ಪುಸ್ತಕಗಳು.

| | |
|---|---|
| ಅಂತರಂಗದ ಕತೆಗಳು | ೦—೮—೦ |
| ಧರ್ಮ ಸಂಕಟ (ನಾಟಕ) | ೦—೪—೦ |
| ವತ್ಸಲಾ (ಕಾದಂಬರಿ) | ೦—೭—೩ |
| ಆನಂದ ಅಥವಾ ಮನೆ ಅಳಿಯ (ಕಾದಂಬರಿ) | ೦—೮—೦ |
| ಅಂಚೆಮನೆ (ನಾಟಕ) | ೦—೪—೦ |
| ಬಾಲ ವಾಙ್ಮಯ (ಪ್ರಬಂಧ) | ೦—೩—೦ |
| ಮೀರಾಬಾಯಿ (ನಾಟಕ) | ೦—೮—೦ |
| ಮುಗುಳು (ಪದ್ಯಾವಳಿ) | ೦—೨—೬ |
| ಆರೋಗ್ಯ ಪ್ರತಾಪ (ನಾಟಕ) | ೦—೧೦—೦ |
| ಗೋಳಿನ ಬಾಳು (ಕಾದಂಬರಿ) | ೦—೬—೦ |
| ಗೀತೆಯ ಕೈಗನ್ನಡಿ | ೦—೬—೦ |
| ಅಡ್ಡ ಬೆಳೆದ ಗಿಡ್ಡಿಯ ಮದುವೆ | ೦—೧—೦ |
| ಮುದುಕನ ಹೆಂಡ್ತಿ ಥಕಥೈ ರಾಥೆ | ೦—೧—೦ |
| ಪಂಚಾರತಿ (ಏಕಾಂಕ ನಾಟಕಗಳ ಸಂಗ್ರಹ) | ೦—೪—೦ |
| ಬೆಳಕು | ೦—೪—೦ |
| ಚಿಗುರು | ೦—೪—೦ |
| ಪ್ರತೀಕಾರ (ನಾಟಕ) | ೦—೪—೦ |
| ಲೋಪಾಮುದ್ರೆ | ೦—೪—೦ |
| ತಿನಿಸು | ೦—೪—೦ |
| ನಮ್ಮ ಉಡುಪಿ. | ೦—೫—೦ |
| ವೀರಭೂಮಿ | ೦—೧—೬ |

**ಕಿರಿಯೂರ ಪ್ರಪಂಚ, ಉಡುಪಿ.**

ಅಂದವಾದ ಮುದ್ರಣವು
ಪ್ರಕಾಶಕನ ಪ್ರಯತ್ನವನ್ನು
ಸಫಲಗೊಳಿಸುತ್ತದೆ.

ಆದುದರಿಂದ ಪ್ರಕಾಶಕನು
ಉತ್ತಮ ಮುದ್ರಕರನ್ನೇ
ಮೊದಲು ಹುಡುಕುತ್ತಾನೆ.

ಅಂದವಾದ ಮುದ್ರಣಕ್ಕೆ

# ನವಯುಗ ಪ್ರೆಸ್

ಉಡುಪಿ.

('ನವಯುಗ' ಮತ್ತು 'ಅಂತರಂಗ' ವಾರಪತ್ರಿಕೆಗಳು
ಅಚ್ಚಾಗುವುದು ಇಲ್ಲಿಯೇ.)

